KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೨೫, ೨೦೦೭ (ಮಾಘ ೫, ಶಕ ವರ್ಷ ೧೯೨೮) | ಸಂಚಿಕೆ ೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎನ್ಇಜಿ/2006/1704 ದಿನಾಂಕ: 27.7.2006.

2) ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s NEG Micon (India) Pvt. Limited ಕಂಪನಿಗೆ ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ 119.13 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 13 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 319 ಎನ್‌ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s NEG Micon (India) Pvt. Limited ಕಂಪನಿಗೆ ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ ಮತ್ತು ಬೆಳಗಾಂ ಜಿಲ್ಲೆಗಳಲ್ಲಿ 119.13 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:–

| Sl. No. | Proposed capacity in MW | Near by villages of the proposed area and district | Geographical area description of the project |
|---|---|---|---|
| (1) | (3) | (4) | (5) |
| 1 | 11.55 MW<br><br>(7 X1.65 MW) | Wadral, Bidarhalli, Hattarwar, **Belgaum district.** | Identified area is a plateau spread across Hattarwar, Bidarhalli and is located on the South-West of Wadaral and it is coming under Chikkodi reference wind monitoring station. It has two peaks and covered in the following Geographical co-ordinates:<br>**Latitude**: 16°20'5"- 16°22'2" N<br>**Longitude**: 74°30'0"- 74°32'23" E<br>**Ridge peaks:** 812, 776m Amsl. |

| Sl. No. | Proposed capacity in MW | Near by villages of the proposed area and district | Geographical area description of the project |
|---|---|---|---|
| (1) | (3) | (4) | (5) |
| 2 | 28.05 MW<br><br>(17 X 1.65 MW) | Hulikatti, Ugarkhod, Hirenandihalli, Mallapur, Kittur, Kallapur, Singanhalli, Heggeri, **Belgaum and Dharwad district.** | The identified area is earmarked in 'L' shape which is spread around North-South and South-East of Kittur. The national highway $NH_4$ is crossing diagonally through this area. Further, it is a mixture of plains and non-contiguous independent hillocks. As per SOI map the identified area is a mixture of forest and non-forest including private lands. The major peaks of the area are given and is held in the following Geographical co-ordinates:<br>**Latitude**: 15°30'0"- 15°41'41" N<br>**Longitude**: 74°45'0"- 74°55'0" E<br>**Ridge peaks:** 717, 743, 757, 748, 766, 771, 795, 784, 778, 768m Amsl. |
| 3 | 38.28 MW<br><br>(24 X 1.65 MW) | Vemalaigudda, Singanabidare, Kullundi, Balekalgudda, **Shimogga district.** | The potential area consists of North-South oriented main ridge including two non-contigous independent ridges and is located on the Sakrebail State Forest. As per SOI map this area appears to be mixed dense jungle covered with bamboo and coffee plantation and are named as Vemalaigudda and Devaragudda. Villages mentioned in column (4) are situated adjacent to this place. The proposed area is covered by the following Geographical co-ordinates:<br>**Latitude**: 13°45'0"- 13°52'54" N<br>**Longitude**: 75°24'25"- 75°30'0" E<br>**Ridge peaks:** 973, 1007, 933, 806, 939, 881, 865, 858, 681m Amsl. |
| 4 | 41.25 MW<br><br>(25 X 1.65 MW) | Heddur, Ganapatikatte, Hirekodagi, Hariharpur, Koppa, Alandur, Madaburu, Muttinakoppa, **Shimogga and Chikmagalur district.** | A large area spread around Hariharapura, Koppa, Guddahalli, Muttinakoppa and Bejjavalli is earmarked for 41.25 MW capacity. The total area is a mixture of complex terrain consisting of several independent and non-contigous ridges. This area is situated in the Malandurgudda State Forest. The major peaks of the area is also given and held by the following Geographical co-ordinates:<br>**Latitude**: 13°30'0"- 13°45'0" N<br>**Longitude**: 75°17'56"- 75°30'0" E<br>**Ridge peaks:** 846, 688, 831, 884, 802, 892, 914, 934, 951, 874, 1049, 1111, 951, 842, 830, 694m Amsl. |
| **Total** | | **119.13 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೋ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ

ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸಿಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 29 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ENERGY SECRETARIAT**

**CORRIGENDUM**

**No: EN 394 NCE 2006, Bangalore, Date: 3rd January 2007**

In Government Order No: EN 394 NCE 2006 dated: 12.10.2006 and the Agreement dated: 23.11.2006 wherever the village name appear as "Machinahalli village"

**Shall be read as**

"Majjur village".

By Order and in the name of the Governor of Karnataka,

**Suresh .B. Krishnappanavar**

P.R. 41 Under Secretary to Government, Energy Department.

## ಇಂಧನ ಸಚಿವಾಲಯ

**ವಿಷಯ:** ಮೆ:: ಅಪರ್ಣ ಪವರ್ ಲಿಮಿಟೆಡ್ ಕಂಪನಿಯವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊಳಲು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಡಿಇ 142 ಎನ್‌ಸಿಇ 2000 ದಿನಾಂಕ: 26.7.2001.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2005 ದಿನಾಂಕ: 17.11.2005.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೊಳಲು/2006/2347 ದಿನಾಂಕ: 14.11.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ಅಪರ್ಣ ಪವರ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಹೊಳಲು ಗ್ರಾಮದ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊಳಲು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.9.2006 ರವರೆಗೆ ವಿಸ್ತರಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಅಪರ್ಣ ಪವರ್ ಲಿಮಿಟೆಡ್ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಜಲಸಂಪನ್ಮೂಲ ಇಲಾಖೆಯಿಂದ ಅನುಮೋದನೆ ಪಡೆದುಕೊಳ್ಳಲು ವಿಳಂಬವಾಗಿರುವುದರಿಂದ ಯೋಜನೆಯ ಅನುಷ್ಟಾನಕ್ಕಾಗಿ ಕಾಲಾವಕಾಶವು ದಿನಾಂಕ: 30.9.2006 ಕ್ಕೆ ಅಂತ್ಯಗೊಂಡಿರುವುದರಿಂದ ಸದರಿ ಅವಧಿಯನ್ನು ದಿನಾಂಕ: 1.10.2006 ರಿಂದ 31.12.2007 ರ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2006, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಸರ್ಕಾರವು ಮೆ:: ಅಪರ್ಣ ಪವರ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಹೊಳಲು ಗ್ರಾಮದ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊಳಲು ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 1.10.2006 ರಿಂದ 31.12.2007 ರ ಅವಧಿಗೆ ವಿಸ್ತರಿಸಿ ಅನುಮತಿ ನೀಡಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 42

## ENERGY SECRETARIAT

**Subject:** Transfer of 0.8 MW Wind Power Capacity in favour of M/s Siddaganga Oil Extractions Pvt. Ltd-reg.

**Read:** 1) Government order No: DE 26 NCE 1999 dated 13.5.1999.
2) Government order No: EN 370 NCE 2006 dated: 25.8.2006.
3) Letter No. KRED/08/KAUPL/2006/3614 dated: 28.12.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated: 25.8.2006 read at (2) above, permission has been accorded for transfer of 1.6 MW capacity Wind Power Project at Majjur Village, Shirahatti Taluk, Gadag District to M/s Kanade Anand Udyog Private Limited from M/s Enercon (I) Limited out of 16 M.W.

Now, the Managing Director, Karnataka Renewable Energy Development Limited, Bangalore in his letter dated: 28.12.2006 read at (3) above, has recommended to the Government for cancellation of 1.6 M.W. of M/s Kanade Anand Udyog Private Limited due to administrative reasons, further recommended to transfer of 0.8 MW Wind Power capacity at Majjur village, Shirahatti Taluk, Gadag District in favour of M/s Siddaganga Oil Extractions Pvt. Ltd. from out of cancelled capacity of 1.6 MW Wind Power Capacity.

The proposal has been examined at the Government level and hence the order:-

**GOVERNMENT ORDER NO: EN 512 NCE(1) 2006, BANGALORE, DATED: 4th JANUARY 2007**

Government accords approval for cancellation of 1.6 M.W. of transfered capacity in favour of M/s Kanade Anand Udyog Private Limited and further permission is accorded for transfer of 0.8 MW Wind Power capacity at Majjur village, Shirahatti Taluk, Gadag District in favour of M/s Siddaganga Oil Extractions Pvt. Ltd. and all the approvals, documents and assignments shall stand transfered in the

name of M/s Siddaganga Oil Extractions Pvt. Ltd. from out of cancelled capacity of 1.6 MW Wind Power Capacity from M/s Kanade Anand Udyog Private Limited.

The terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,

**Suresh .B. Krishnappanavar**

Under Secretary to Government, Energy Department.

P.R. 43

**Subject:** Transfer of 0.8 MW Wind Power Capacity in favour of M/s Kaleesuwari Refinery Private Limited-reg.

**Read:**
1) Government order No: DE 26 NCE 1999 dated: 13.5.1999.
2) Government order No: EN 370 NCE 2006 dated: 25.8.2006.
3) Letter No. KRED/08/KAUPL/2006/3614 dated: 28.12.2006 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated: 25.8.2006 read at (2) above, permission has been accorded for transfer of 1.6 MW capacity Wind Power Project at Machinahalli Village, Shirahatti Taluk, Gadag District to M/s Kanade Anand Udyog Private Limited from M/s Enercon (I) Limited out of 16 M.W.

Now, the Managing Director, Karnataka Renewable Energy Development Limited, Bangalore in his letter dated: 28.12.2006 read at (3) above, has recommended to the Government for cancellation of 1.6 M.W. of M/s Kanade Anand Udyog Private Limited due to administrative reasons, further recommended to transfer of 0.8 MW Wind Power capacity at Machinahalli village, Shirahatti Taluk, Gadag District in favour of M/s Kaleesuwari Refinery Private Limited from out of cancelled capacity of 1.6 MW Wind Power Capacity.

The proposal has been examined at the Government level and hence the order:-

**GOVERNMENT ORDER NO: EN 512 NCE(2) 2006, BANGALORE, DATED: 4th JANUARY 2007**

Government accords approval for cancellation of 1.6 M.W. of transfered capacity in favour of M/s Kanade Anand Udyog Private Limited and further permission is accorded for transfer of 0.8 MW Wind Power capacity at Machinahalli village, Shirahatti Taluk, Gadag District in favour of M/s Kaleesuwari Refinery Private Limited and all the approvals, documents and assignments shall stand transfered in the name of M/s Kaleesuwari Refinery Private Limited from out of cancelled capacity of 1.6 MW Wind Power Capacity from M/s Kanade Anand Udyog Private Limited.

The terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka,

**Suresh .B. Krishnappanavar**

Under Secretary to Government, Energy Department.

P.R. 44

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ನವದೆಹಲಿಯಲ್ಲಿ ನಡೆದ ಮ್ಯಾನೇಜ್‌ಮೆಂಟ್ ಪ್ಲಾನಿಂಗ್ ಅಂಡ್ ಫ್ಯೂಚರ್ ಡೆವಲಪ್‌ಮೆಂಟ್ ಆಫ್ ಹಂಪಿ ವರ್ಲ್ಡ್ ಹೆರಿಟೇಜ್ ಸೈಟ್ ಕಾರ್ಯಗಾರದಲ್ಲಿ ಭಾಗವಹಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರ ಪತ್ರ ಸಂಖ್ಯೆ: ಡಿಎಎಂ/ಆ.ಸ/ 2006-07 ದಿನಾಂಕ: 26-10-2006.

**ಪ್ರಸ್ತಾವನೆ:**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರು ಮೇಲೆ ಓದಲಾದ ದಿನಾಂಕ: 26-10-2006ರ ಪತ್ರದಲ್ಲಿ ಯುನೆಸ್ಕೋ ದೆಹಲಿ ಶಾಖೆಯು ಏರ್ಪಡಿಸಿರುವ ಮ್ಯಾನೇಜ್‌ಮೆಂಟ್ ಪ್ಲಾನಿಂಗ್ ಅಂಡ್ ಫ್ಯೂಚರ್ ಡೆವಲಪ್‌ಮೆಂಟ್ ಆಫ್ ಹಂಪಿ ವರ್ಲ್ಡ್ ಹೆರಿಟೇಜ್ ಸೈಟ್ ಎಂಬ ಕಾರ್ಯಗಾರವು ನವದೆಹಲಿಯಲ್ಲಿ ದಿನಾಂಕ: 13-11-2006 ರಂದು ನಡೆಯುವುದರಿಂದ ಸದರಿ ಕಾರ್ಯಗಾರದಲ್ಲಿ ಭಾಗವಹಿಸುವ ಸಲುವಾಗಿ ಬೆಂಗಳೂರು-ನವದೆಹಲಿ ನಡುವೆ ವಿಮಾನದಲ್ಲಿ ಪ್ರಯಾಣ ಮಾಡಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 230 ಕೆಎಂಯು 2006, ಬೆಂಗಳೂರು ದಿನಾಂಕ: 13ನೇ ಡಿಸೆಂಬರ್ 2006**

ನವದೆಹಲಿಯಲ್ಲಿ ಯುನೆಸ್ಕೋ ವತಿಯಿಂದ ನವೆಂಬರ್ 13 2006 ರಂದು ನಡೆದ ಮ್ಯಾನೇಜ್‌ಮೆಂಟ್ ಪ್ಲಾನಿಂಗ್ ಅಂಡ್ ಫ್ಯೂಚರ್ ಡೆವಲಪ್‌ಮೆಂಟ್ ಆಫ್ ಹಂಪಿ ವರ್ಲ್ಡ್ ಹೆರಿಟೇಜ್ ಕಾರ್ಯಗಾರದಲ್ಲಿ ಭಾಗವಹಿಸುವ ಸಲುವಾಗಿ ಬೆಂಗಳೂರು ಮತ್ತು ನವದೆಹಲಿಗೆ ಪ್ರಯಾಣ ಮಾಡಲು ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು ಸದರಿ ಅಧಿಕಾರಿಯ ವೇತನ ಲೆಕ್ಕಶೀರ್ಷಿಕೆಯಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1786

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಮೈಸೂರು ಜಿಲ್ಲಾ ತಾಲ್ಲೂಕು ಗ್ಯಾಸೆಟಿಯರ್‌ನ ಪರಿಣಿತರ ಸಲಹಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರ ಪತ್ರ ಅ.ಸ.ಪತ್ರ ಸಂಖ್ಯೆ :ಕಗ್ಯಾಇ/ಆಶಾ/ಮೈ.ತಾ.ಗ್ಯಾ.ಸ.ಸಮಿತಿ/2006-07/517 ದಿನಾಂಕ: 31-07-2006.

**ಪ್ರಸ್ತಾವನೆ:**

ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 31-07-2006ರ ಪತ್ರದಲ್ಲಿ ಗ್ಯಾಸೆಟಿಯರ್ ಸಲಹಾ ಸಮಿತಿಯ ಸಲಹೆ ಮೇರೆಗೆ ತಾಲ್ಲೂಕು ಮಟ್ಟದ ವಿಶೇಷ ಗ್ಯಾಸೆಟಿಯರ್‌ಗಳನ್ನು ತಯಾರಿಸುವ ಯೋಜನೆಯಡಿ ಪೈಲಟ್ ಯೋಜನೆಯಾಗಿ ಮೈಸೂರು ಜಿಲ್ಲೆಯ ಏಳು ತಾಲ್ಲೂಕುಗಳ ಗ್ಯಾಸೆಟಿಯರ್‌ಗಳನ್ನು ಇದೇ ಸಾಲಿನಲ್ಲಿ ಪ್ರಕಟಿಸಲು ಹೊರಗಿನ ವಿದ್ವಾಂಸರಿಂದ ತಯಾರಿಸಲ್ಪಟ್ಟ ಹಸ್ತಪ್ರತಿಗಳನ್ನು ಕರಾರುವಾಕ್ಕಾಗಿ ಹಾಗೂ ಸಮರ್ಪಕವಾಗಿ ಪರಾಮರ್ಶೆ ನಡೆಸುವ ಸಲುವಾಗಿ ಪರಿಣತರನ್ನೊಳಗೊಂಡ ಸಲಹಾ ಸಮಿತಿಯನ್ನು ರಚಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 22 ಕರಾಗೆ 2006 ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2006**

ಸರ್ಕಾರವು ಮೈಸೂರು ಜಿಲ್ಲೆಯ 7 ತಾಲ್ಲೂಕುಗಳ ಗ್ಯಾಸೆಟಿಯರ್‌ಗಳ ಪ್ರಕಟಣೆ ಸಂಬಂಧ ಹೊರಗಿನ ವಿದ್ವಾಂಸರಿಂದ ತಯಾರಿಸಲ್ಪಟ್ಟ ಹಸ್ತಪ್ರತಿಗಳನ್ನು ಪರಾಮರ್ಶಿಸುವ ಸಲುವಾಗಿ ಪರಿಣತರನ್ನೊಳಗೊಂಡ ಈ ಕೆಳಕಂಡ ಸಮಿತಿಯನ್ನು ರಚಿಸುತ್ತದೆ.

| | | |
|---|---|---|
| 1) | ಸರ್ಕಾರದ ಕಾರ್ಯದರ್ಶಿ,<br>ಕನ್ನಡ ಮತ್ತು ಸಂಸ್ಕೃತಿ, ವಾರ್ತಾ<br>ಮತ್ತು ಪ್ರವಾಸೋದ್ಯಮ ಇಲಾಖೆ. | ಅಧ್ಯಕ್ಷರು |
| 2) | ಡಾ: ಕೆ.ಅನಂತರಾಮು,<br>ನಿವೃತ್ತ ಕನ್ನಡ ಪ್ರಾಧ್ಯಾಪಕರು<br>ಮಹಾರಾಜ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾಲಯ. | ಸದಸ್ಯರು |
| 3) | ಡಾ: ಡಿ.ಎಸ್.ಜಯಪ್ಪಗೌಡ<br>ಸಂಶೋಧಕರು ಹಾಗೂ ಪ್ರಾಧ್ಯಾಪಕರು<br>ನಂ.57, 'ಚಂದನ' 1ನೇ ಅಡ್ಡ ರಸ್ತೆ<br>4ನೇ ಹಂತ, ತೊಣಚಿಕೊಪ್ಪಲು ಬಡಾವಣೆ, ಮೈಸೂರು. | ಸದಸ್ಯರು |
| 4) | ಡಾ: ಎ. ಕೃಷ್ಣಮೂರ್ತಿಹನೂರು<br>ಕನ್ನಡ ಪ್ರಾಧ್ಯಾಪಕರು,<br>ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,<br>ಮಾನಸಗಂಗೋತ್ರಿ, ಮೈಸೂರು-570006 | ಸದಸ್ಯರು |
| 5) | ಮುಖ್ಯ ಸಂಪಾದಕರು<br>ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಈಗಾಗಲೇ ಅಸ್ತಿತ್ವದಲ್ಲಿರುವ ಜಿಲ್ಲಾ ಗ್ಯಾಸೆಟಿಯರ್‌ಗಳ ಸಲಹಾ ಸಮಿತಿ ಸದಸ್ಯರು ಪಡೆಯುವ ಉಪಸ್ಥಿತಿ ಭತ್ಯೆ ಪ್ರವಾಸ ಭತ್ಯೆಗಳನ್ನೇ ಮೇಲಿನ ಸದಸ್ಯರು ಪಡೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1787

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಹಂಪೆಯಲ್ಲಿನ ಸಂರಕ್ಷಿತ ಸ್ಮಾರಕಗಳ ಸರ್ವೇಕ್ಷಣಾ ಕಾರ್ಯ ಕೈಗೊಳ್ಳಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006, ದಿನಾಂಕ: 7–4–2006.

2) ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ರವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/48/2006–07 ದಿನಾಂಕ: 03–10–2006

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ: 7–4–2006ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ 2006–07 ನೇ ಸಾಲಿನ ಯೋಜನೆಗಳಲ್ಲಿ ಶಾಸನಗಳ ಸರ್ವೇಕ್ಷಣೆಗೆ ರೂ. 50,000–00ಗಳನ್ನು ನಿಗದಿಪಡಿಸಿದೆ. ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ(2)ರಲ್ಲಿ ಓದಲಾದ ದಿನಾಂಕ: 03–10–2006ರ ಪತ್ರದಲ್ಲಿ ಹಂಪಿಯಲ್ಲಿನ ಸಂರಕ್ಷಿತ ಸ್ಮಾರಕಗಳ ಸರ್ವೇಕ್ಷಣಾ ಕಾರ್ಯವನ್ನು ಹಂಪಿ ವಿಶ್ವ ಪರಂಪರೆ ನಿರ್ವಹಣಾ ಅಭಿವೃದ್ಧಿ ಪ್ರಾಧಿಕಾರದ ಮೂಲಕ ಕೈಗೊಳ್ಳಲಾಗಿತ್ತು. ಇದಕ್ಕೆ ಬಳ್ಳಾರಿ ಜಿಲ್ಲಾಡಳಿತ, ಹಂಪಿ ಪ್ರಾಧಿಕಾರ ಹಾಗೂ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗಳು ಸಹಯೋಗ ನೀಡಿದ್ದು, ಇದಕ್ಕಾಗಿ ರೂ.40,000–00ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 99 ಕೆಎಂಯು 2006, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2006**

ಹಂಪಿಯಲ್ಲಿನ ಸ್ಮಾರಕಗಳು ವಿಶ್ವ ಪರಂಪರೆ ಪಟ್ಟಿಯಲ್ಲಿದ್ದು, ಪ್ರವಾಸೋದ್ಯಮದ ದೃಷ್ಟಿಯಿಂದಲೂ ಪ್ರಮುಖ ಸ್ಥಾನ ಪಡೆದಿರುವುದರಿಂದ ಹಂಪಿ ವಿಶ್ವ ಪರಂಪರೆ ಪ್ರಾಧಿಕಾರದ ವ್ಯಾಪ್ತಿಯಲ್ಲಿರುವ ವಾಸ್ತುಶಿಲ್ಪ ಮತ್ತು ಪುರಾತತ್ವ ಸರ್ವೇಕ್ಷಣೆಗಳ ಮೂಲಕ ಹಂಪಿ ಸಂರಕ್ಷಿತ ಸ್ಮಾರಕಗಳ ಸರ್ವೇಕ್ಷಣಾ ಕಾರ್ಯಕೈಗೊಳ್ಳುವ ಸಲುವಾಗಿ ರೂ.40,000–00 (ರೂ.ನಲವತ್ತು ಸಾವಿರಗಳು ಮಾತ್ರವೆ) ಗಳನ್ನು ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಮೈಸೂರು ರವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಅನುಮತಿ ನೀಡಲಾಗಿದೆ.

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.

2) ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ಬಗೆಗಿನ ವೆಚ್ಚವನ್ನು 2006–07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1096 ಐಎಫ್(ಬಿಎ) 2006 ದಿನಾಂಕ: 21–11–2006 ರಲ್ಲಿ ನೀಡಿರುವ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1788

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ರಾಜ್ಯ ಮಟ್ಟದ ಆಡಳಿತ ಭಾಷಾ ವಿಚಾರ ಸಂಕಿರಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ: 07–04–2006

2) ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ:ಕಸನಿ:5:ಕಅ/2006–07 ದಿನಾಂಕ: 03–10–2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 07–04–2006ರ ಸರ್ಕಾರಿ ಆದೇಶದಲ್ಲಿ ರಾಜ್ಯ ಮಟ್ಟದ ಆಡಳಿತ ಭಾಷಾ ವಿಚಾರ ಸಂಕಿರಣಕ್ಕೆ ರೂ.2.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರು ಮೇಲೆ(2)ರಲ್ಲಿ ಓದಲಾದ ದಿನಾಂಕ: 03–10–2006ರ ತಮ್ಮ ಪತ್ರದಲ್ಲಿ ಸದರಿ ವಿಚಾರ ಸಂಕಿರಣವನ್ನು ಕೈಗೊಳ್ಳಲು ಒಟ್ಟು ರೂ.2.00ಲಕ್ಷಗಳ ವೆಚ್ಚಕ್ಕೆ ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 113 ಕಸನಿ 2006, ಬೆಂಗಳೂರು ದಿನಾಂಕ: 22ನೇ ಡಿಸೆಂಬರ್ 2006**

ಸರ್ಕಾರವು 2006ರ ಡಿಸೆಂಬರ್ ಮಾಹೆಯಲ್ಲಿ 2 ದಿನಗಳ ಕಾಲ ನಡೆಯಲಿರುವ ವಿಚಾರ ಸಂಕಿರಣಕ್ಕೆ ತಗಲುವ ವೆಚ್ಚ ರೂ.2.00ಲಕ್ಷಗಳನ್ನು ಬಳಸಿಕೊಳ್ಳಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ಮಂಜೂರಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ.

(ಅ) ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗುವುದೋ ಅದೇ ಉದ್ದೇಶಕ್ಕೆ ಬಳಕೆ ಮಾಡತಕ್ಕದ್ದು.

(ಆ) ಅನುದಾನ ಬಳಕೆ ಮಾಡಿದ ಕುರಿತು ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಬಗೆಗಿನ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205-00-001-0-01-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: 1029 ಐಎಫ್ (ಬಿಎ) 2006 ದಿನಾಂಕ: 06-11-2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 34

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

## ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 110 ಕೆಎಂಯು 2006, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2006**

ಸರ್ಕಾರಿ ಆದೇಶ ಸಂಖ್ಯೆ: ಸಂಕಇ 110 ಕೆಎಂಯು 2006 ದಿನಾಂಕ: 05-12-2006ರ ಆದೇಶ ಭಾಗದಲ್ಲಿ ಕ್ರಮಸಂಖ್ಯೆ 4 ರಲ್ಲಿರುವ "ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್" ಎಂಬುದನ್ನು "ಬೆರಳಚ್ಚುಗಾರರು" ಎಂದು ದಿನಾಂಕ: 05-12-2006 ರಿಂದಲೇ ಜಾರಿಗೆ ಬರುವಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 35

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕಿನ ರಾಜನಹಳ್ಳಿ ಬಳಿ ತುಂಗಭದ್ರ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ, ಜಗಳೂರು ಮತ್ತು ಹರಪನಹಳ್ಳಿ ತಾಲ್ಲೂಕಿನ ಕೆರೆಗಳನ್ನು ತುಂಬಿಸುವ ಯೋಜನೆ ಕುರಿತು.

**ಓದಲಾಗಿದೆ:** ಪತ್ರ ಸಂಖ್ಯೆ: ಜಸಅ/ಕೃಗೋಫ/ದಾ.ಕೆರೆ/2006-07 ದಿನಾಂಕ:12.12.2006. ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರಿಂದ.

**ಪ್ರಸ್ತಾವನೆ:**

1) ದಾವಣಗೆರೆ ಜಿಲ್ಲೆಯು ರಾಜ್ಯದ ಹೃದಯ ಭಾಗದ ಜಿಲ್ಲೆಯಾಗಿದ್ದು, ಈ ಜಿಲ್ಲೆಯ ದಾವಣಗೆರೆ, ಜಗಳೂರು ಮತ್ತು ಹರಪನಹಳ್ಳಿ ತಾಲ್ಲೂಕಿನ ಭಾಗವು ಬರಪೀಡಿತ ಪ್ರದೇಶವಾಗಿರುತ್ತದೆ. ಈ ರೀತಿ ಗುರುತಿಸಲಾಗಿರುವ ಭಾಗದಲ್ಲಿ ಭಾರಿ ಮತ್ತು ಮದ್ಯಮ ನೀರಾವರಿಯ ಸೌಲಭ್ಯವೂ ಸಹ ಇಲ್ಲದೆ, ಇಲ್ಲಿ ಕೇವಲ ಸಣ್ಣ ನೀರಾವರಿ ಕೆರೆಗಳು ಮಾತ್ರ ಮುಖ್ಯವಾದ ನೀರಾವರಿ ಮೂಲಗಳಾಗಿರುತ್ತವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅಸಮರ್ಪಕ ಹಾಗೂ ಅಕಾಲಿಕ ಮಳೆಯಿಂದಾಗಿ ಈ ಕೆರೆಗಳೂ ಸಹ ತುಂಬುತ್ತಿಲ್ಲ. ಇದರಿಂದಾಗಿ, ಈ ಪ್ರದೇಶದಲ್ಲಿ ಬಹುತೇಕ ಕೃಷಿಕರು ನೀರಾವರಿ ಸೌಲಭ್ಯದಿಂದ ವಂಚಿತರಾಗಿ ಬಹಳ ಅನಿಶ್ಚಿತ ಪರಿಸ್ಥಿತಿಗೆ ಒಳಗಾಗಿರುತ್ತಾರೆ. ಅಲ್ಲದೆ ಭೂಮಿಯ ಅಂತರ್ಜಲ ಮಟ್ಟವೂ ಕಡಿಮೆಯಾಗಿ ಕೊಳವೆ ಬಾವಿ ಆಧಾರಿತ ಕೃಷಿಗೆ ಹಾಗು ಕುಡಿಯುವ ನೀರಿಗೆ ಬಹಳ ತೊಂದರೆಯಾಗುತ್ತಿದೆ. ಈ ಕ್ಲಿಷ್ಟ ಪರಿಸ್ಥಿತಿಯಿಂದ ಹೊರ ಬರಲು, ಸ್ಥಳೀಯ ಜನತೆಯು ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕಿನ ರಾಜನಹಳ್ಳಿ ಬಳಿ ತುಂಗಭದ್ರ ನದಿಯಿಂದ ನೀರನ್ನು ಮೇಲೆತ್ತಿ ದಾವಣಗೆರೆ, ಜಗಳೂರು ಮತ್ತು ಹರಪನಹಳ್ಳಿ ತಾಲ್ಲೂಕಿನ ಕೆರೆಗಳನ್ನು ತುಂಬಿಸುವ ಯೋಜನೆಯನ್ನು ನಿರ್ಮಿಸಿ ಕೊಡುವಂತೆ ಬೇಡಿಕೆಯನ್ನು ಮುಂದಿಟ್ಟಿರುತ್ತಾರೆ.

2) ಈ ಯೋಜನೆಯಲ್ಲಿ ದಾವಣಗೆರೆ ಜಿಲ್ಲೆಯ 19 ಕೆರೆಗಳು ಮತ್ತು ಹಗರಿಬೊಮ್ಮನಹಳ್ಳಿ ಜಲಾಶಯಗಳಿಗೆ ತುಂಗಭದ್ರಾ ನದಿಯಿಂದ ನೀರನ್ನು ತುಂಬಿಸಲು ಪ್ರಸ್ತಾಪಿಸಿದ್ದು, ಸುಮಾರು 100.00ಕೋಟಿ ರೂ.ಗಳ ವೆಚ್ಚವಾಗಬಹುದೆಂದು ಅಂದಾಜಿಸಲಾಗಿದೆ. ಈ ಪ್ರಮಾಣದ ಯೋಜನೆಯನ್ನು ಕೈಗೊಳ್ಳಲು ಸಣ್ಣ ನೀರಾವರಿ ಇಲಾಖೆಯಲ್ಲಿ ಅನುದಾನದ ಕೊರತೆ ಇರುತ್ತದೆ. ಈ ಕಾಮಗಾರಿಗೆ ಸುಮಾರು 100.00 ಕೋಟಿ ರೂ.ಗಳ ಒಂದೇ ಕಾಮಗಾರಿಯನ್ನು ಸಣ್ಣ ನೀರಾವರಿ ಇಲಾಖೆಯ ಅನುದಾನದಲ್ಲಿ ತೆಗೆದುಕೊಳ್ಳುವುದು ಕಷ್ಟ ಸಾಧ್ಯವಾಗುತ್ತದೆ. ಆದ್ದರಿಂದ, ಈ ಕಾಮಗಾರಿಯನ್ನು ಬೃಹತ್ ನೀರಾವರಿ ಇಲಾಖೆಗೆ ಹಸ್ತಾಂತರಿಸಿ ಕಾರ್ಯಗತಗೊಳಿಸುವ ಬಗ್ಗೆ ಪರಿಶೀಲಿಸಲಾಗಿದೆ. ಅದಲ್ಲದೆ ಈ ಯೋಜನೆಗೆ ನೀರನ್ನು ತುಂಗಭದ್ರಾ ನದಿಯಿಂದ ಎತ್ತಲು ಪ್ರಸ್ತಾಪಿಸಿರುವುದರಿಂದ ಮುಖ್ಯ ಇಂಜಿನಿಯರ್, (ಅಂ.ರಾ.ಜ) ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಇವರ ಅಭಿಪ್ರಾಯ ಕೋರಲಾಗಿದ್ದು, ಸದರಿ ಪ್ರಸ್ತಾವನೆಗೆ ಹೊಸ ನೀರಿನ ಹಂಚಿಕೆ ಅಗತ್ಯವಿರುವುದಿಲ್ಲ. ರಾಷ್ಟ್ರೀಯ ಜಲ ನೀತಿಯ ಪ್ರಕಾರ ಕುಡಿಯುವ ನೀರಿಗೆ ಆದ್ಯತೆ ಕೊಡಬೇಕಿರುವುದರಿಂದ, (ಕೆ-8) ಉಪ ಕೊಳ್ಳದಲ್ಲಿ ಸಣ್ಣ ನೀರಾವರಿಗೆ ಹಂಚಿಕೆಯಾಗಿರುವ ಪ್ರಮಾಣದ ಮಿತಿಯಲ್ಲಿ ಬಳಸಿಕೊಳ್ಳಲು ಅನುಮೋದನೆ ನೀಡಬಹುದಾಗಿದೆ ಎಂಬುದಾಗಿ ಅಭಿಪ್ರಾಯ ನೀಡಿರುತ್ತಾರೆ. ಈ ಪ್ರಸ್ತಾವನೆ ಬಗ್ಗೆ ಜಲಸಂಪನ್ಮೂಲ ಇಲಾಖೆಯ ಅಭಿಪ್ರಾಯ ಕೋರಲಾಗಿದ್ದು, ಆ ಇಲಾಖೆಯು ಕೆಲವೊಂದು ಷರತ್ತುಗಳಿಗೊಳಪಟ್ಟು ಈ ಪ್ರಸ್ತಾವನೆಗೆ ಸಹಮತಿ ನೀಡಿದೆ.

3) ಪ್ರಸ್ತಾಪಿತ ಯೋಜನೆಯನ್ನು ನಿರಂತರ ಬರಗಾಲಕ್ಕೆ ಒಳಗಾಗುತ್ತಿರುವ ಪ್ರದೇಶಗಳಲ್ಲಿ ಕೈಗೊಳ್ಳುತ್ತಿದ್ದು, ಇದರಿಂದ ಅತಿ ಅವಶ್ಯವಾದ ಕುಡಿಯುವ ನೀರಿನ ಪೂರೈಕೆ ಹಾಗೂ ರೈತರಿಗೆ ಕನಿಷ್ಟ ನೀರಾವರಿ ಸೌಲಭ್ಯವನ್ನು ಒದಗಿಸಲು ಉದ್ದೇಶಿಸಿದೆ. ಮೇಲಾಗಿ ರಾಷ್ಟ್ರೀಯ ಹಾಗೂ ರಾಜ್ಯದ ಜಲ ನೀತಿಗಳಲ್ಲಿ ಕುಡಿಯುವ ನೀರಿಗೆ ಪ್ರಥಮ ಆದ್ಯತೆಯನ್ನು ನೀಡಲಾಗಿದೆ.

4) ಈ ಮೇಲ್ಕಂಡ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನನೀಇ/ 33/ ಏನಿಯೋ/ 2006, ದಿನಾಂಕ:5ನೇ ಜನವರಿ 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ದಾವಣಗೆರೆ ಜಿಲ್ಲೆಯ 19 ಕೆರೆಗಳು ಹಾಗೂ ಹಗರಿಬೊಮ್ಮನಹಳ್ಳಿಯ ಜಲಾಶಯಗಳಿಗೆ ಏತ ನೀರಾವರಿ ಯೋಜನೆಯ ಮೂಲಕ ನೀರು ತುಂಬಿಸಲು ಸುಮಾರು ರೂ.100.00 ಕೋಟಿ ಅಂದಾಜು ಮೊತ್ತದ ಯೋಜನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.

ಅ) ಈ ಯೋಜನೆಯ ಅನುಷ್ಠಾನವನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ವಹಿಸುವುದು.

ಆ) ಈ ಯೋಜನೆಗೆ ಅಗತ್ಯವಿರುವ ಅನುದಾನವನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಆಯವ್ಯಯದ ಅನುದಾನದ ಮೂಲಕ ಅಥವಾ ಹೆಚ್ಚುವರಿಯಾಗಿ IEBR ಹಂಚಿಕೆ ಮೂಲಕ ನೀಡುವುದು.

ಇ) ಈ ಯೋಜನೆಯ ಕಾಮಗಾರಿಯು ಪೂರ್ಣಗೊಂಡ ನಂತರ ಇದನ್ನು ನಿರ್ವಹಣೆಗಾಗಿ ಮತ್ತೆ ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸುವುದು.

2. This Order falls within the purview of the proviso to Sub-Rule(2) of Rule 17 of the Karnataka Government (Transaction of Business) Rules, 1977, and is issued accordingly.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 47

**INFRASTRUCTURE DEVELOPMENT SECRETARIAT**

**Subject:** Release of funds for fencing up of land retained by GoK abutting the BIAP Site.

**Read:** 1) Letter No.AGM (BIAP)/4117/2005-06 dated 17.02.2006 enclosing a copy of the report of Sri. C.R. Narayana Rao, Architects and Engineers dated 24.01.2006.

**Preamble:-**

Government of Karnataka had acquired 4266 acres and 27 guntas of land for the new Bangalore International Airport at Devanahalli. The entire extent was handed over to KSIIDC for leasing out to BIAL. As per the Land Lease Agreement, KSIIDC was authorized to enter into a Land Lease Deed with the BIAL. In the meanwhile, due to change in the runway orientation, it became necessary to acquire about 108 acres of land on the southern side for the second runway. This also resulted in 408 acres 33 guntas, on the northern side becoming excess of the Airport requirement. Therefore, while examining the Land Lease Agreement (as well as the State Support Agreement) with the BIAL, it was decided by GoK to retain this 408 acres of additional land to be utilized for promoting / establishing facilities which would be complementary to the development of the airport region.

2. To prevent any possible encroachments, the MD, KSIIDC in the letter read above had sent a proposal for fencing up of the408 acres of land retained by GoK abutting the BIAP site. He has also forwarded the report dated 24.01.2006 of Sri. C.R. Narayana Rao, Architect and Engineer which comprises of the following options for fencing:

| Sl. No. | Description | Height above ground level (Mtrs) | Length (Mtrs) | Rate (Rs) | Amount in (Rs.) |
|---|---|---|---|---|---|
| 1 | Option I: RC precast panel wall with precast column. | 2.85 | 5237 | 3750 | 1,96,38,750/- |
| 2 | Option II: Random Rubble Masonry Pillar/Column | 2.85 | 5237 | 3250 | 1,70,20,250/- |
| 3 | Option III: RC column with hollow block wall. | 2.85 | 5237 | 4500 | 2,36,66,500/- |
| 4 | Alt to Option III: Block masonry wall and pillar column | 2.85 | 5237 | 4100 | 2,14,71,700/- |

3. Out of the three options, C.R.Narayana Rao has recommended option-I for the following reasons:-

(a) Faster construction and it would look better;

(b) It can be removed and reused elsewhere at a nominal cost, if the situation arises;

(c) It will be in line with the adjacent BIAL boundary wall.

4. The M.D, KSIIDC has sought approval of Government for fencing to be carried out as per option-I and for release of funds for fencing. After careful examination of the proposal the following orders are issued.

**GOVERNMENT ORDER NO. IDD 80 DIA 2006, BANGALORE DATED 20th December 2006**

In the circumstances explained above, Government accords sanction for release of an amount of Rs.500-00 lakhs (Rupees Five Hundred lakhs) only to KSIIDC for construction of fencing for 408 acres 33 guntas of Government land abutting the BIAP site as per option – I of the report date 24.01.2006 of the Architect and development of an approach road linking this land to the National Highway on one side and the Bangalore International Airport on the other side.

2. The above sanction is subject to the following conditions:-

a) KSIIDC will ensure that the fencing has deterrence effectiveness against encroachments and land grabbing.

b) All revenues arising out of future commercial exploitation of land would be ploughed back into the existing Infrastructure Fund of Government.

c) The provisions of KTPP rules are complied.

3. The above expenditure shall be met out of the budgetary allocation of 2006-07 provided under the Head of Account 5465-01-190-2-07-211-Development of 408 acres of Govt. land adjacent to BIAP".

4. The Chairperson and Managing Director, KSIIDC is authorised to draw this amount on a payees receipt duly countersigned by the Under Secretary to Government, Infrastructure Development Department.

5. This order is issued with the concurrence of Finance Department vide U.O.Note No.FD 1991.Exp-1/2006 dated 16.12.2006.

By Order and in the name of the Governor of Karnataka,

**N. Manjula Geetha**

Under Secretary to Government,

Infrastructure Development Department.

P.R. 1791

**Subject:** Release of funds towards New Cost Sharing Railway Projects-Kottur-Harihar New Broad Gauge Railway Line Project – reg.

**Read:**
1) G.O. No. IDD 1 NSW 2002 dt. 22.11.2002.
2) G.O. No. IDD 1 NSW 2002 dt. 22.03.2002.
3) G.O. No. IDD 1 NSW 2002 dt. 19.02.2003.
4) G.O. No. IDD 47 NSW 2003 dt. 12.09.2003.
5) G.O. No. IDD 47 NSW 2003 dt. 22.1.2004.
6) G.O. No. IDD 47 NSW 2003 (P) dt. 26.03.2004.
7) G.O. No. IDD 51 NSW 2004 dt. 19.07.2004.
8) G.O. No. IDD 63 IDM 2005 dt. 25.05.2005.
9) G.O.No.IDD 66 NSW 05 dated: 15-12-2005.
10) G.O.No.IDD 68 NSW 2003 dated 30.08.2006
11) G.O.No.IDD 98 NSW 2003 dated: 21/25-10-2006
12) The letter of Chief Administrative Officer, SWR, Bangalore vide No.W.352 CN/BNC dated: 17-10-2006.
13) G.O.No.FD 300 BRS 2006 dated 12.10.2006.
14) G.O.No.FD 367 BRS 2006 dated: 16-12-2006.

**Preamble:**

Government of Karnataka has so far released Rs.44.24 crores towards its share of the Investment on Cost Sharing Projects, through various Government Orders read at Sl. Nos. (1) to (10) above.

2.The Chief Administrative Officer, South Western Railway, Bangalore, in his letter No.W.352CN/BNC dated: 17-10-2006 indicated that the Railways have already spent Rs.25.80 crores towards Kottur-Harihar new broad gauge railway line, and out of which GoK have released only Rs.15.00 crores and requested for immediate deposit of Rs.77.64 crores towards its 2/3rd share, since Railways have made a provision of Rs.35.92 crores in their budget for 2006-07.

3. Since the provision of Rs.35.00 crores provided in the current years budget in the Head of Account "5465- 01-190-3-05-Cost sharing for new project-211- Investments (Plan)" is meant for Bangalore-Kengeri and Kengeri-Ramanagaram railway line doubling project and out of which Rs.18.74 crores have already been released to these projects, an additionality of Rs.25.00 crores has been requested by the IDD. The FD in their order dated 16-12-2006 read at Sl.No.(14) above, have accorded sanction for the additional grant of Rs.25.00 crores under the Head of Account "5465-01-190-3-05 (Plan) 211 Investments for meeting expenditure towards Kottur-Harihara Railway Project. Hence this order.

**GOVERNMENT ORDER NO.IDD 98 NSW 2003, BANGALORE, DATED: 20th December 2006**

After careful examination of the request of Railways, Government is pleased to release Rs.25.00 crores (Rupees Twenty five crores) only being the part of the balance 2/3rd share of Government of Karnataka by means of the additional grants under the Head of Account **"5465-01-190-3-05-Cost Sharing for new projects – 211 – Investment (Plan)"** towards Cost Sharing Railway Projects - Kottur - Harihar new broad gauge railway project.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. The Chief Engineer (Cons), South Western Railway, Bangalore shall arrange to furnish the monthly expenditure statement to Infrastructure Development Department by fifth of every succeeding month.

3. This order issues with the concurrence of the Finance Department, vide its U.O. Note No. FD 1984/Exp-I/06 dated 16.12.2006.

By Order and in the name of the Governor of Karnataka,
**N. Manjula Geetha**
P.R. 1792 Under Secretary to Government,
Infrastructure Development Department.

**Subject:** BIA – release of funds towards land acquisition for Trumpet Interchange.

**Read:** 1) F.D's G.O.No.FD 366 BRS 2006, dated: 16-12-06
2) F.D's U.O.Note No.FD 1828 Exp.1, dated 16-12-06.

**Preamble:**

The Airport Site at Devanhalli, abutts the NH-7 for about 800 meters. This is the only frontage available from the NH to enter the site. NHAI is constructing a RoB here as railway line crosses NH 7 at this point. The RoB would block entire frontage. Considering that the airport which is coming up at a distance of about 35 Kms from Bangalore City and being built as a world class facility with the potential to become a major aviation hub in a short span of time needs a proper high speed access and approach from NH-7 Government of Karnataka in consultation with NHAI. Railways and Bangalore International Airport Limited and after examining various options concluded that NHAI may take up the construction of a Trumpet Interchange at the identified location near the airport site under the accepted terms and the Government of Karnataka would provide the land free of cost for construction of TI.

2. Consequent to the discussions held with and on the request made by the Chairperson & Managing Director, KSIIDC the question of sanctioning additional funds of Rs.10.00 crores in addition to

the Rs.5.00 crores already provided in this years budget for Trumpet Interchange for acquiring 44 acres 25 guntas of land required for construction of Trumpet Interchange has been examined by the Government.

3. Finance Department in G.O. read at (1) above have accorded sanction for the additional grant of 10.00 crores under the Head of A/c 5465-01-190-2-06 (Plan) 211 Investment to meet the expenditure towards land acquisition for Trumpet Interchange subject to regularization by reappropriation of overall savings under grant No.6 through supplementary estimate before the close of Financial year.

4. Further in U.O dated 16-12-06 read at Sl.No.2 above F.D. has concurred to release 10.00 crores as additionality to Rs.5.00 crores towards land acquisition for T.I during 2006-07 with a condition that drawal from the Treasury should be made only when payment is due.

5. To facilitate release of this amount to KSIIDC, the following orders are issued.

**GOVERNMENT ORDER NO.IDD 75 DIA 2006, BANGALORE, DATED: 20th DECEMBER 2006**

After careful consideration of the above Government sanction is accorded for the release of a total sum of Rs.15.00 crores (Rupees fifteen crores only) to KSIIDC towards land acquisition for TI during 2006-07 under the Head of Account 5465-01-190-2-06 (Plan)-211 Investments with a condition that drawal from Treasury should be made only when payment is due.

2. The Chairperson & Managing Director, KSIIDC is authorised to draw the above amount on a payee's receipt duly countersigned by the Under Secretary to Government, IDD.

3. This order is issues vide F.D's concurrence in U.O.Note No.FD 1828 Exp.I/06, dated 16-12-2006.

By Order and in the name of the Governor of Karnataka,

**N. Manjula Geetha**

P.R. 13

Under Secretary to Government,

Infrastructure Development Department.

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ:** ಬೆಳಗಾವಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ.ಮೂಅಇ 38 ರಾಅವಿ 2003 ದಿನಾಂಕ 30.1.2006.

2) ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಹಾಗೂ ಅಧಿಕ ಜಿಲ್ಲಾ ದಂಡಾಧಿಕಾರಿಗಳು, ಬೆಳಗಾವಿ ಇವರ ಅ.ಸ.ಪ.ಸಂ.ವಿವ. 4024/06-07 ದಿನಾಂಕ 14.11.2006.

**ಪ್ರಸ್ತಾವನೆ:**

ಬೆಳಗಾಂ ವಿಮಾನ ನಿಲ್ದಾಣ ಈಗಾಗಲೇ ಕಾರ್ಯಾಚರಣೆಯಲ್ಲಿರುತ್ತದೆ. ವಿಮಾನ ಸಂಚಾರದ ಹೆಚ್ಚಳದಿಂದ ವಿಮಾನ ನಿಲ್ದಾಣವನ್ನು ಉನ್ನತೀಕರಿಸಿ ಬೋಯಿಂಗ್-737 ಮಾದರಿಯ ದೊಡ್ಡ ವಿಮಾನಗಳ ಹಾರಾಟಕ್ಕೆ ಅನುವು ಮಾಡಿಕೊಡುವ ನಿಟ್ಟಿನಲ್ಲಿ ಹಾಲಿ ಬೆಳಗಾಂ ವಿಮಾನ ನಿಲ್ದಾಣವನ್ನು 400 ಎಕರೆ ಪ್ರದೇಶಕ್ಕೆ ವಿಸ್ತೀರ್ಣಗೊಳಿಸಲು ಹಾಗೂ ಇದಕ್ಕೆ ಸಂಬಂಧಿಸಿದ ಭೂಸ್ವಾಧೀನ ಕ್ರಮ ಕೈಗೊಳ್ಳಲು ಈಗಾಗಲೇ ಸರ್ಕಾರ ತೀರ್ಮಾನಿಸಿದ್ದು, ಅದರಂತೆ ಮೇಲೆ ಕ್ರಮ ಸಂಖ್ಯೆ.(1) ರಲ್ಲಿ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಆದೇಶದನ್ವಯ ಕ್ರಮ ಕೈಗೊಳ್ಳಲು ಕ್ರಮ.ಸಂಖ್ಯೆ.(2) ರಲ್ಲಿ ಓದಲಾದ ಪತ್ರ ದಿನಾಂಕ 14.11.2006 ರಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಹಾಗೂ ಅಧಿಕ ಜಿಲ್ಲಾ ದಂಡಾಧಿಕಾರಿಗಳು, ಬೆಳಗಾವಿ ಇವರು ಬೆಳಗಾವಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿಪಡಿಸಲು ಅವಶ್ಯವಿರುವ ಬೆಳಗಾವಿ ತಾಲ್ಲೂಕಿನ ಸಾಂಬ್ರಾ, ಬಾಳೆಕುಂದ್ರಿ, ಹೊನ್ನಿಹಾಳ ಮತ್ತು ಮಾವಿನಕಟ್ಟಿ ಗ್ರಾಮಗಳಲ್ಲಿ ಒಟ್ಟು 370 ಎಕರೆ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಭೂಸ್ವಾಧಿನ ವೆಚ್ಚ ರೂ.12,89,48,018.00 ಗಳನ್ನು ಅಂದಾಜಿಸಿದ್ದು, ಇದರಲ್ಲಿ ಮೊದಲಿನ ಕಂತು ರೂ.6,44,74,009.00 ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಅವಶ್ಯವಿರುವ ಹಣವನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ.ಮೂಅಇ 38 ರಾಅವಿ 2003, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2006**

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಬೆಳಗಾವಿ ವಿಮಾನ ನಿಲ್ದಾಣದ ಉನ್ನತೀಕರಣಕ್ಕಾಗಿ

ಅಗತ್ಯವಿರುವ 370 ಎಕರೆ ಜಮೀನಿನ ಭೂಸ್ವಾಧೀನಕ್ಕೆ ತಗುಲಬಹುದಾದ ಒಟ್ಟು ವೆಚ್ಚ ರೂ.12,89,48,018.00 (ರೂ.ಹನ್ನೆರಡು ಕೋಟಿ ಎಂಬತ್ತೊಂಬತ್ತು ಲಕ್ಷ ನಲವತ್ತೆಂಟು ಸಾವಿರದ ಹದಿನೆಂಟು ಮಾತ್ರ) ಗಳ ಪೈಕಿ ಮೊದಲಿನ ಕಂತು ರೂ.645.00 ಲಕ್ಷಗಳನ್ನು ಈ ಜಮೀನಿನ ನಕ್ಷೆಗೆ (land plan) ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದಿಂದ ಅನುಮೋದನೆ ಪಡೆಯುವ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "5465-01-190-01-05 (P) 211 ಬಂಡವಾಳ" ಇದರಡಿಯಲ್ಲಿ 2006-07ನೇ ಸಾಲಿನಲ್ಲಿ ಮೈನರ್ ವಿಮಾನ ನಿಲ್ದಾಣಗಳ ಅಭಿವೃದ್ಧಿಗೆ ಒದಗಿಸಿರುವ ಆಯವ್ಯಯ ಭರಿಸತಕ್ಕದ್ದು.

3. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಪೇಯೀಸ್ ರಸೀತಿಯ (Payees Receipt) ಮುಖೇನ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ಹಣ ತೆಗೆಯಬಹುದಾಗಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ. ಆಇ.2074.Exp-I/06 ದಿನಾಂಕ 18.12.2006 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಮಂಜುಳಗೀತ**

ಪಿ.ಆರ್. 1794

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವೀರಭದ್ರಪ್ಪ ಎ.ಎಸ್.ಐ. (ನಿವೃತ್ತ) ಇಲಾಖಾ ವಿಚಾರಣೆಯ ಬಗ್ಗೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾ ಪೊಲೀಸ್ ಕಛೇರಿ, ರಾಯಚೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ (3) ಇವಿ 17/2005 ದಿನಾಂಕ: 09.10.2005.

2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಅಪೀಲು (1) 1/2006-07 ದಿನಾಂಕ: 18.04.2006.

3) ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ: ಪಿಎಸ್‌ಸಿ 124 ಸಿಎನ್‌ಎಸ್ 2006, ದಿನಾಂಕ: 04.12.2006.

**ಪ್ರಸ್ತಾವನೆ:**

ಶ್ರೀ ವೀರಭದ್ರಪ್ಪ ಎ.ಎಸ್.ಐ. (ನಿವೃತ್ತ) ರವರು ಈ ಹಿಂದೆ ಸದರ್ ಬಜಾರ್ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಈ ಕೆಳಕಂಡ ಆರೋಪದ ಮೇರೆಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 09.10.2005ರ ಆದೇಶದಲ್ಲಿ ಎಸ್.ಪಿ.ರಾಯಚೂರು ಇವರು ಇಲಾಖಾ ವಿಚಾರಣೆ ಆದೇಶಿಸಿದ್ದರು.

ಶ್ರೀ ವೀರಭದ್ರಪ್ಪ, ಎ.ಎಸ್.ಐ. (ನಿವೃತ್ತ) ರವರು ದಿನಾಂಕ: 29.07.2005 ರಂದು ರಾಯಚೂರು ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ರಾಜ್ಯ ಪೊಲೀಸ್ ವತಿಯಿಂದ ದಾಖಲಾದ ಗುನ್ನೆ ಸಂಖ್ಯೆ: 70/2000 ಕಲಂ 143, 118, 120(ಬಿ), 124(ಎ), 153(ಬಿ) ಸಹಿತ 149 ಐಪಿಸಿ ಪ್ರಕರಣದಲ್ಲಿ ನೀವು ಸಾಕ್ಷ್ಯದಾರರಿದ್ದು, ಸದರಿ ಪ್ರಕರಣದಲ್ಲಿನ ತನಿಖಾಧಿಕಾರಿಗಳ ಮುಂದೆ ಕೊಟ್ಟಿರುವ ಹೇಳಿಕೆಯಂತೆ ದಿನಾಂಕ: 14.03.2005 ರಂದು ನ್ಯಾಯಾಲಯದಲ್ಲಿ ಈ ಪ್ರಕರಣವು ವಿಚಾರಣೆಗೆ ಬಂದಾಗ ಸರ್ಕಾರದ ಪರವಾಗಿ ನುಡಿಯದೇ ಯಾವುದೇ ಪ್ರೇರಣೆ ಮತ್ತು ಉದ್ದೇಶದಿಂದ ಪ್ರತಿಕೂಲ ಸಾಕ್ಷಿಯಾಗಿ ನುಡಿದು ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಪ್ರದರ್ಶಿಸಿರುತ್ತಾರೆ.

ಸದರಿ ಆದೇಶದಲ್ಲಿ ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಪೂರ್ವ ವಲಯ, ರಾಯಚೂರು ರವರನ್ನು ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾ ಅಧಿಕಾರಿಗಳು ಇಲಾಖಾ ವಿಚಾರಣೆಯನ್ನು ನಡೆಸಿ ಮತ್ತು ವರದಿಯಲ್ಲಿ ಆರೋಪಿತ ಪೊಲೀಸ್ ಅಧಿಕಾರಿ ಇವರ ವಿರುದ್ಧ ಮಾಡಲಾಗಿರುವ ಆರೋಪ ಯಾವುದೇ ಸಂಶಯಕ್ಕೆ ಆಸ್ಪದ ಇಲ್ಲದಂತೆ ಸಾಬೀತಾಗಿರುತ್ತದೆಯೆಂದು ಅಭಿಪ್ರಾಯ ಪಟ್ಟಿದ್ದಾರೆ.

ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ವೀರಭದ್ರಪ್ಪ, ಎ.ಎಸ್.ಐ. ರವರು ದಿನಾಂಕ: 31.10.2005 ರಂದು ನಿವೃತ್ತರಾಗಿರುವುದರಿಂದ ಸದರಿ ಇಲಾಖಾ ವಿಚಾರಣೆಯ ಅಂತಿಮ ಆದೇಶವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 214(2) (ಎ) ಅನ್ವಯ ಅಂತಿಮ ಆದೇಶಗಳನ್ನು ಸರ್ಕಾರ ಹೊರಡಿಸ ಬೇಕಾಗಿರುವುದರಿಂದ ವಿಚಾರಣಾ ಅಧಿಕಾರಿಗಳ ವರದಿಯನ್ನು ಸರ್ಕಾರಕ್ಕೆ ಕಳುಹಿಸಿ ಅಂತಿಮ ಆದೇಶ ಹೊರಡಿಸಲು ಡಿಜಿ ಮತ್ತು ಐಜಿಪಿ ರವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಇಲಾಖಾ ವಿಚಾರಣೆಯ ಸಮಯದಲ್ಲಿ ಸದರಿ ಆಪಾದಿತ ಅಧಿಕಾರಿಯ ಮೇಲಿನ ಇಲಾಖಾ ವಿಚಾರಣೆಯ ಕಾಲಕ್ಕೆ ಪಡೆಯಲಾದ ಅಭಿಯೋಗಪರ ಸಾಕ್ಷ್ಯದಾರರ ಹೇಳಿಕೆಗಳನ್ನು ಹಾಗೂ ಇಲಾಖಾ ವಿಚಾರಣೆ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಇಲಾಖಾ ವಿಚಾರಣೆ ಅಧಿಕಾರಿಗಳ ವರದಿ ಒಪ್ಪಿಕೊಂಡು ಏಕೆ ಶಿಕ್ಷೆ ವಿಧಿಸಬಾರದು ಎಂಬುದಕ್ಕೆ ಕಾರಣ ಕೇಳುವ ನೋಟೀಸನ್ನು ದಿನಾಂಕ: 25.09.2006 ರಲ್ಲಿ ಜಾರಿ ಮಾಡಲಾಗಿದೆ. ಸದರಿ ನೋಟೀಸನ್ನು ಆರೋಪಿತ ಪೊಲೀಸ್ ಅಧಿಕಾರಿ ರವರು ಪಡೆದು ದಿನಾಂಕ: 09.10.2006 ರಲ್ಲಿ ಸಮಜಾಯಿಷಿಯನ್ನು ಸಲ್ಲಿಸಿದ್ದಾರೆ.

ಸದರಿ ಸಮಜಾಯಿಷಿಯನ್ನು ಪರಿಶೀಲಿಸಲಾಗಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಅಲ್ಲಗೆಳೆಯಲು ಯಾವುದೇ ಸಮರ್ಥನೀಯ ಕಾರಣಗಳು ಇಲ್ಲದ ಪ್ರಯುಕ್ತ ವಿಚಾರಣಾ ಅಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 140 ಪೊಸಇ 2006, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2006**

ಶ್ರೀ ವೀರಭದ್ರಪ್ಪ ಎ.ಎಸ್.ಐ. (ನಿವೃತ್ತ) ಇವರ ನಿವೃತ್ತಿ ವೇತನದಲ್ಲಿ ಪ್ರತಿ ತಿಂಗಳಿಗೆ ರೂ.250/- (ಇನ್ನೂರ ಐವತ್ತು ರೂಪಾಯಿಗಳು ಮಾತ್ರ) ರಂತೆ ಎರಡು ವರ್ಷಗಳ ಮಾಹೆಯಾನ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗ ರವರ ಪತ್ರ ಸಂಖ್ಯೆ: ಪಿಎಸ್‌ಸಿ 124 ಸಿಎನ್‌ಎಸ್ 06, ದಿನಾಂಕ: 04.12.2006 ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1785

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಂ.ಮಲ್ಲಿಕಾರ್ಜುನಯ್ಯ, ಪ್ರದಸ, ಡಿ.ಪಿ.ಓ. ರಾಯಚೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಆದೇಶ ಸಂಖ್ಯೆ: ಎಸ್.ಬಿ.ಐ/ಸಿಬ್ಬಂದಿ-4/ಶಿಕ್ಷೆ-44:2002-03.

**ಪ್ರಸ್ತಾವನೆ:**

ಶ್ರೀ ಎಂ. ಮಲ್ಲಿಕಾರ್ಜುನಯ್ಯ, ಪ್ರದಸ, ರವರು ಇವರ ವಿರುದ್ಧ ಈ ಕೆಳಕಂಡ ಆರೋಪಕ್ಕಾಗಿ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿ, 1957ರ ನಿಯಮ 11 ರಂತೆ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ನೀವು ಶ್ರೀ ಎಂ.ಮಲ್ಲಿಕಾರ್ಜುನಯ್ಯ, ಪ್ರ.ದ.ಸ. ಗುಪ್ತವಾರ್ತೆಯಲ್ಲಿನ ಮಿಶ್ರಣ ಶಾಖೆಯಲ್ಲಿ ಕೆಲಸ ಮಾಡುತ್ತಿರುವಾಗ ಈ ಕಛೇರಿಯ ನಿಯಂತ್ರಣ ಕೋಣೆಯಲ್ಲಿ ಕೆಲಸ ಮಾಡುತ್ತಿರುವ ಶ್ರೀ ಕೆ.ಎಂ.ಲೋಕನಾಥ್, ಹೆಚ್.ಸಿ. ರವರಿಗೆ ತ್ಯಾಗರಾಜ ಕೋ-ಆಪರೇಟಿವ್ ಬ್ಯಾಂಕಿನಿಂದ ರೂ.50,000-00 ಸಾಲ ಪಡೆಯಲು ಇಲಾಖಾ ವತಿಯಿಂದ ವೇತನ ಪ್ರಮಾಣ ಪತ್ರ ಸಿಗುವುದಿಲ್ಲವೆಂದು ತಿಳಿದು ದಿನಾಂಕ: 25.01.2000 ರಲ್ಲಿ ಅನಧಿಕೃತ ಸುಳ್ಳು ಪ್ರಮಾಣ ಪತ್ರವನ್ನು ಸೃಷ್ಟಿಸಿರುತ್ತೀರಿ. ಇದಲ್ಲದೇ ಇದಕ್ಕೆ ಜಾಮೀನುದಾರರಾದ ಶ್ರೀ ಜಿ.ನಾರಾಯಣ, ಪಿ.ಸಿ. (ಚಾಲಕ) ರವರ ಸುಳ್ಳು ವೇತನ ಪ್ರಮಾಣ ಪತ್ರವನ್ನು ಸಹ ಅವರಿಗೆ ತಿಳಿಯದೇ ಅನಧಿಕೃತವಾಗಿ ಸೃಷ್ಟಿಸಿ ಅದಕ್ಕೆ ಈ ಕಛೇರಿಯ ವಾಹನ ಶಾಖೆಯಲ್ಲಿದ್ದ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ ರವರ ಪರವಾಗಿ (ಎಂ.ಟಿ.) ಎಂಬ ಮೊಹರನ್ನು ದುರುಪಯೋಗ ಮಾಡಿದ್ದಲ್ಲದೇ ಈ ಕಛೇರಿಯ ಆಡಳಿತಾಧಿಕಾರಿಯಾದ ಶ್ರೀ ಬಿ.ಆರ್. ಗಲಗಲಿಯವರ ಹೆಸರನ್ನು ಇಂಗ್ಲೀಷ್‌ನಲ್ಲಿ ನಕಲಿ ಸಹಿ ಮಾಡಿ ಕೊಟ್ಟಿರುವುದಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳ ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಪೊಲೀಸ್ ಅಡಿಷನಲ್ ಡೈರೆಕ್ಟರ್ ಜನರಲ್ ರವರು ಮೇಲೆ 1 ರಲ್ಲಿ ಓದಲಾದ ಆದೇಶದಲ್ಲಿ ಸದರಿಯವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ಬಡ್ತಿಗಳಿಗೆ ಅಡಚಣೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ ಹಾಗೂ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನಲ್ಲಿ ಕಳೆದ ದಿನಗಳೆಂದು ಪರಿಗಣಿಸಲಾಗಿದೆ ಎಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಆರೋಪ ನಿಸ್ಸಂದೇಹವಾಗಿ ಸಾಬೀತಾಗಿದೆ. ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆ ಸೂಕ್ತವಾಗಿದೆ ಎಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 5 ಪೊಸಿಲಿ 2006, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) 1957 ನಿಯಮ 274ಎ ರನ್ವಯ ಸರ್ಕಾರಕ್ಕೆ ಪ್ರಸಕ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಮಲ್ಲಿಕಾರ್ಜುನಯ್ಯ, ಪ್ರ.ದ.ಸ. ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 25 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಂ.ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ, ಕುಂದಗೋಳ ತಾಲ್ಲೂಕು, ಹಾಲಿ ನಿವೃತ್ತರು, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಎಡಿಇ 2004, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2006**

ಶ್ರೀ ಹೆಚ್.ಎಂ. ಕಾಲೇಮದಾರ್, ನಿವೃತ್ತ ಕಂದಾಯ ನಿರೀಕ್ಷಕರು, ಇವರು ಧಾರವಾಡ ಜಿಲ್ಲೆ, ಕುಂದಗೋಳ ತಾಲ್ಲೂಕು ಕಛೇರಿಯಲ್ಲಿ ಕಂದಾಯ ನಿರೀಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಎಸಗಿದ ಕರ್ತವ್ಯಲೋಪ ಹಾಗೂ ಸರಕಾರಿ ಕೆಲಸದಲ್ಲಿ ತೋರಿದ ನಿರ್ಲಕ್ಷ್ಯತನವು ಸರ್ಕಾರದ ಗಮನಕ್ಕೆ ಬಂದಿರುವುದರಿಂದ, ಶ್ರೀ ಹೆಚ್.ಎಂ. ಕಾಲೇಮದಾರ್, ನಿವೃತ್ತ ಕಂದಾಯ ನಿರೀಕ್ಷಕ, ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರಿ ಭಾವಿಸಿರುತ್ತದೆ.

ಆದುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್.ಎಂ. ಕಾಲೇಮದಾರ್, ನಿವೃತ್ತ ಕಂದಾಯ ನಿರೀಕ್ಷಕ, ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 06 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಧಾರವಾಡ ಜಿಲ್ಲಾಧಿಕಾರಿಯವರ ಅ.ಸ.ಪತ್ರ ಕ್ರಮ: ಸಿಬ್ಬಂದಿ/1/ಇವಿ/ವಹಿ/8/2004-05, ದಿನಾಂಕ: 6.1.2005.

2) ಧಾರವಾಡ ಜಿಲ್ಲಾಧಿಕಾರಿಯವರ ಪತ್ರದ ಸಂಖ್ಯೆ: ಕ್ರಮ: ಸಿಬ್ಬಂದಿ:1ಇವಿ/ವಹಿ/8/2004-05, ದಿನಾಂಕ: 8.7.2005.

3) ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್.ಡಿ. 77 ಎಡಿಇ 2004, ದಿನಾಂಕ: 21.12.2005.

4) ಲಿಖಿತ ಹೇಳಿಕೆ:

1) ಶ್ರೀ ಶಿವಪ್ಪ ಹಾನಗಲ್, ದಿನಾಂಕ: 24.2.2006.

2) ಶ್ರೀ ಎಸ್.ಎಂ. ದಾನಣ್ಣವರ, ದಿನಾಂಕ: 8.2.2006.

3) ಶ್ರೀ ಹೆಚ್.ಎಂ. ಕಾಲೇಮದಾರ್, ದಿನಾಂಕ: 4.7.2006.

**ಪ್ರಸ್ತಾವನೆ:**

ಧಾರವಾಡ ಜಿಲ್ಲೆ, ಕುಂದಗೋಳ ತಾಲ್ಲೂಕು ಕಛೇರಿಯಲ್ಲಿ ವೃದ್ಯಾಪ್ಯ ವೇತನ, ಅಂಗವಿಕಲ ಮಾಸಾಶನ, ವಿಧವಾ ವೇತನಕ್ಕೆ ಸಂಬಂಧಿಸಿದ ಪ್ರಕರಣಗಳು, ಹಕ್ಕು ದಾಖಲಾತಿಗಳಿಗೆ ಸಂಬಂಧಿಸಿದ ಪ್ರಕರಣಗಳು ಹಾಗೂ ಗಣಕೀಕರಣ ವಿಭಾಗದಲ್ಲಿ ಬಾಕಿ ಇರುವ ಹಕ್ಕು ದಾಖಲಾತಿ ಪ್ರಕರಣಗಳನ್ನು ಇತ್ಯರ್ಥಗೊಳಿಸುವ ಬಗ್ಗೆ ಈ ಕೆಳಕಂಡ ಅಧಿಕಾರಿ / ನೌಕರರು ಶೀಘ್ರವಾಗಿ ವಿಲೇವಾರಿ ಮಾಡದೇ ವಿಳಂಬ ಮಾಡಿ ಕರ್ತವ್ಯ ಲೋಪ ಎಸಗಿರುವುದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1) ಮತ್ತು (2) ರಲ್ಲಿ ಓದಲಾದ ಪತ್ರಗಳಲ್ಲಿ ಧಾರವಾಡ ಜಿಲ್ಲಾಧಿಕಾರಿಯವರು ಅವರುಗಳಿಗೆ ಸಂಬಂಧಿಸಿದ ಆರೋಪ ಪಟ್ಟಿಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

1) ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ.

2) ಶ್ರೀ ಎಸ್.ಎಂ. ದಾನಣ್ಣವರ, ಹಿಂದಿನ ಕಂದಾಯ ನಿರೀಕ್ಷಕ, ಸಂಶಿ.

3) ಶ್ರೀ ಹೆಚ್.ಎಂ. ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು), ಕುಂದಗೋಳ ತಾಲ್ಲೂಕು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರ ಅಡಿಯಲ್ಲಿ ಮೇಲೆ ಕ್ರ.ಸಂ. (1) ಮತ್ತು (2) ರಲ್ಲಿರುವ ಪತ್ರಗಳಲ್ಲಿ ಪ್ರಸ್ತಾಪಿಸಲಾಗಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿ/ನೌಕರರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ: 21.12.2005ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು. ಕ್ರ.ಸಂ. (4) ರಲ್ಲಿ ಓದಲಾದ ಪತ್ರಗಳಲ್ಲಿ ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ, ಶ್ರೀ ಎಸ್.ಎಂ. ದಾನಣ್ಣವರ, ಹಿಂದಿನ ಕಂದಾಯ ನಿರೀಕ್ಷಕ, ಸಂಶಿ ಮತ್ತು ಶ್ರೀ ಹೆಚ್.ಎಂ.ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು), ಕುಂದಗೋಳ, ಇವರುಗಳು ತಮ್ಮ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ / ನೌಕರರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 77 ಎಡಿಇ 2004, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಶಿವಪ್ಪ ಹಾನಗಲ್, ಹಿಂದಿನ ತಹಶೀಲ್ದಾರ್, ಕುಂದಗೋಳ, ಪ್ರಸ್ತುತ ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು ಕೊಪ್ಪಳ ಜಿಲ್ಲೆ, ಶ್ರೀ ಎಸ್.ಎಮ್. ದಾನಣ್ಣವರ್, ಹಿಂದಿನ ಕಂದಾಯ ನಿರೀಕ್ಷಕ, ಸಂಶಿ, ಕುಂದಗೋಳ ತಾಲ್ಲೂಕು ಮತ್ತು ಶ್ರೀ ಎಚ್.ಎಂ. ಕಾಲೇಮದಾರ್, ಹಿಂದಿನ ಕಂದಾಯ ನಿರೀಕ್ಷಕ (ಈಗ ನಿವೃತ್ತರು), ಕುಂದಗೋಳ ತಾಲ್ಲೂಕು, ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಎಸ್. ಪಾಟೀಲ್, "ಶುಭೋದಯ", ಮಿಚಿಗನ್ ಕಾಂಪೌಂಡ್, ಸಪ್ತಾಪುರ, ಧಾರವಾಡ-8, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಧಾರವಾಡ ಜಿಲ್ಲಾಧಿಕಾರಿ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಪ್ರಕರಣದ ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ, ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ

ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಧಾರವಾಡ ಜಿಲ್ಲಾಧಿಕಾರಿಗಳು ಪಾವತಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 07

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ, ನಿರ್ದೇಶಕರು (ತಾಂತ್ರಿಕ ಕೋಶ) ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 57 ಎಸ್ಎಫ್‌ಪಿ 2006 ದಿನಾಂಕ: 3.7.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯಲ್ಲಿನ ತಾಂತ್ರಿಕ ಕೋಶಕ್ಕೆ ಶ್ರೀ ಪುನಾತಿ ಶ್ರೀಧರ, ಐ.ಎಫ್.ಎಸ್. ಇವರನ್ನು ಹಿರಿಯ ನಿರ್ದೇಶಕರ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿದೆ. ಆದುದರಿಂದ ಪ್ರಸ್ತುತ ಅಸ್ಥಿತ್ವದಲ್ಲಿರುವ ನಿರ್ದೇಶಕರ ಹುದ್ದೆಯನ್ನು ಹಿರಿಯ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2006, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ನಿರ್ದೇಶಕರ ಹುದ್ದೆಯನ್ನು ಶ್ರೀ ಪುನಾತಿ ಶ್ರೀಧರ, ಐ.ಎಫ್.ಎಸ್. ಇವರು ಕಾರ್ಯಭಾರ ವಹಿಸಿಕೊಂಡಂದಿನಿಂದ ಅವರ ಸೇವೆ ಅಗತ್ಯವಿರುವವರೆಗೆ ಅಥವಾ ಮುಂದಿನ ಆದೇಶದವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ.13820-17220 ಗಳ ವೇತನ ಶ್ರೇಣಿಯ ಹಿರಿಯ ನಿರ್ದೇಶಕರು (ತಾಂತ್ರಿಕ) ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 2064 ವೆಚ್ಚ-5/2006, ದಿನಾಂಕ: 14.12.2006 ರಲ್ಲಿ ನೀಡಿರುವ ಸಹಮತಿಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 09

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಕಾರ್ಯದರ್ಶಿ ಹುದ್ದೆಯನ್ನು ಮರು ಪದನಾಮೀಕರಿಸಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ/ಐಎಎಸ್/VD/721, ದಿನಾಂಕ: 06.12.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಮಹಾಲೇಖಪಾಲರ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹುದ್ದೆಯನ್ನು ದಿನಾಂಕ: 2.12.2005 ರಿಂದ ಮುಂದುವರೆಸುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 103 ಸಸಿವಿ 2006, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ಶ್ರೀಮತಿ ರಂಜನಿ ಶ್ರೀಕುಮಾರ್, ಐ.ಎ.ಎಸ್, ಅವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಿ ಮುಂದುವರಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 10

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದ ಮಾಜಿ ಭೂ ಮಾಲೀಕರಿಗೆ 2006-07ನೇ ಸಾಲಿಗೆ ಭೂ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರ ಪತ್ರಸಂಖ್ಯೆ: ಕಂಶಾ/ಎಫ್ಒಆರ್/ಸಿಆರ್/76/2006-07, ದಿನಾಂಕ: 24.7.2006.
2) ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಪತ್ರಸಂಖ್ಯೆ: ಕಂ/ಭೂಸು/27/2006-07, ದಿನಾಂಕ: 26.10.2005.
3) ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರ ಪತ್ರಸಂಖ್ಯೆ: ಕಂವಿ/ಭೂಸು/ಸಿಆರ್/34/2006-07, ದಿನಾಂಕ: 17.8.2006.
4) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರಸಂಖ್ಯೆ: ಎಂ2/ಎಲ್ಆರ್ಎಫ್ 271 2004-05 ದಿನಾಂಕ: 4.9.2006.
5) ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪತ್ರಸಂಖ್ಯೆ: ಎಲ್ಆರ್ಎಫ್/(2)ಸಿಆರ್/54/ 2006-07, ದಿನಾಂಕ: 17.11.2006.
6) ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಪತ್ರಸಂಖ್ಯೆ ಎಲ್ಆರ್ಎಂ/(1)ಸಿಆರ್/19/2006-07, ದಿನಾಂಕ: 3.10.2006.
7) ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರ ಪತ್ರಸಂಖ್ಯೆ: ಭೂಸು/15/2006-07, ದಿನಾಂಕ:29.9.2006.
8) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪತ್ರಸಂಖ್ಯೆ: ಕಂಭೂಸು/38/3498/2002-03, ದಿನಾಂಕ: 8.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು ಇವರು ಮಾಜಿ ಭೂಮಾಲೀಕರಿಗೆ ಭೂ ಪರಿಹಾರ ನೀಡುವ ಸಲುವಾಗಿ ಜಿಲ್ಲಾಧಿಕಾರಿಗಳು, ಬೆಳಗಾವಿ ಇವರು ರೂ.40,00,000-00 ಲಕ್ಷಕ್ಕೆ, ಬಳ್ಳಾರಿ ಜಿಲ್ಲೆ ಜಿಲ್ಲಾಧಿಕಾರಿಗಳು 1,00,000 ಲಕ್ಷಕ್ಕೆ, ಬಿಜಾಪುರ ಜಿಲ್ಲೆ ಜಿಲ್ಲಾಧಿಕಾರಿಗಳು ರೂ.4,75,000-00ಕ್ಕೆ, ಚಿಕ್ಕಮಗಳೂರು ಜಿಲ್ಲೆ ಜಿಲ್ಲಾಧಿಕಾರಿಗಳು ರೂ.1,25,215-00/- ಕ್ಕೆ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ರೂ.91,00,000-00ಕ್ಕೆ, ದಾವಣಗೆರೆ ಜಿಲ್ಲೆ ಜಿಲ್ಲಾಧಿಕಾರಿಗಳು ರೂ.96,970-00ಕ್ಕೆ, ಹಾಸನ ಜಿಲ್ಲೆ ಜಿಲ್ಲಾಧಿಕಾರಿಗಳು ರೂ.10,94,858-00ಕ್ಕೆ, ಕೊಪ್ಪಳ ಜಿಲ್ಲೆ ಜಿಲ್ಲಾಧಿಕಾರಿಗಳು ರೂ.20,10,324-00ಕ್ಕೆ, ಬೇಡಿಕೆ ಸಲ್ಲಿಸಿದ್ದು ಅದನ್ನು ಪರಿಶೀಲಿಸಿದ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಬೇಕಾದ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಎಲ್ಆರ್ಎಂ 2006, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2006**

ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಅಡಿಯಲ್ಲಿ ಭೂಮಿಯನ್ನು ಕಳೆದುಕೊಂಡ ಮಾಜಿ ಭೂಮಾಲೀಕರಿಗೆ ಪರಿಹಾರವನ್ನು ಪಾವತಿಸಲು 2006-07ನೇ ಸಾಲಿಗೆ ಈ ಕೆಳಕಂಡ ಜಿಲ್ಲೆಗಳ ಹೆಸರಿನ ಎದುರಿಗೆ ಸೂಚಿಸಿರುವ ಮೊತ್ತವನ್ನು ಲೆಕ್ಕಶೀರ್ಷಿಕೆ 4515-00-103-1-01-100 (ಯೋಜನೇತರ) ಅಡಿಯಲ್ಲಿ ಒಟ್ಟು ರೂ.93,97,185-00 ನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಜಿಲ್ಲೆಗಳ ಹೆಸರು | ಮಂಜೂರು ಮಾಡಲಾದ ಅನುದಾನ (ರೂ.ಗಳಲ್ಲಿ) |
|---|---|---|
| 1 | ಬೆಳಗಾವಿ | 20,00,000 |
| 2 | ಬಳ್ಳಾರಿ | 1,00,000 |
| 3 | ಬಿಜಾಪುರ | 4,75,000 |
| 4 | ಚಿಕ್ಕಮಗಳೂರು | 1,25,215 |
| 5 | ದಕ್ಷಿಣ ಕನ್ನಡ | 50,00,000 |
| 6 | ದಾವಣಗೆರೆ | 96,970 |
| 7 | ಹಾಸನ | 6,00,000 |
| 8 | ಕೊಪ್ಪಳ | 10,00,000 |
| | **ಒಟ್ಟು** | **93,97,185** |

ಈ ಆದೇಶದಲ್ಲಿ ಮಂಜೂರಾದ ಅನುದಾನಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು (ಯುಟಿಲೈಸೇಷನ್ ಸರ್ಟಿಫಿಕೆಟ್) ಈ ಎಲ್ಲಾ ಸಂಬಂಧಿತ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2003, ದಿನಾಂಕ: 12.6.2003 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿ ನೀಡಿರುವ ಅಧಿಕಾರದನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 01

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಸುಧಾರಣೆ).

**ವಿಷಯ:** ಕಾರ್ಕಳ ತಾಲ್ಲೂಕು ಹೆಬ್ರಿ ಗ್ರಾಮದ ಸ.ನಂ.ಬ್ರ:214:1 ರಲ್ಲಿ ರಿಸರ್ವ್ ಫಾರೆಸ್ಟ್ ಜಮೀನನ್ನು ಅಕ್ರಮವಾಗಿ ಮಂಜೂರು ಮಾಡಿದ ಅಧಿಕಾರಿ/ಸಿಬ್ಬಂದಿ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ 44 ಎಡಿಇ 2004, ದಿನಾಂಕ: 6.10.2006.
2) ಸರ್ಕಾರದ ತಿದ್ದೋಲೆ ಸಂಖ್ಯೆ: ಕಂಇ 17 ಎಡಿಇ 2005, ದಿನಾಂಕ: 10.11.2006.
3) ಶ್ರೀ ಬಿ.ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೈರಂಗಳ ಗ್ರಾಮ, ಭಂಟ್ವಾಳ ತಾಲ್ಲೂಕು ಇವರ ದಿನಾಂಕ: 18.10.2006ರ ಮನವಿ.

**ಪ್ರಸ್ತಾವನೆ:**

ಕಾರ್ಕಳ ತಾಲ್ಲೂಕು, ಹೆಬ್ರಿ ಗ್ರಾಮದ ಸ.ನಂ.:214/1 ರಲ್ಲಿನ ಜಮೀನು ಅಕ್ರಮ ಸಕ್ರಮದಡಿ ಕಾನೂನು ಬಾಹಿರವಾಗಿ ಮಂಜೂರು ಮಾಡಿರುವ ಸಂಬಂಧ ಹಿಂದಿನ ತಹಶೀಲ್ದಾರರಾದ ಶ್ರೀ ಶಾಂತಾರಾಮ್ ಚಿಪಳೂಣ್‌ಕರ್ ಮತ್ತಿತರ ನೌಕರರ ವಿರುದ್ಧ ಜಂಟಿ ಇಲಾಖೆ ವಿಚಾರಣೆಯನ್ನು ಜರುಗಿಸಲು ಮೇಲೆ ಓದಲಾದ ಕ್ರ.ಸಂ.(1)ರ ಆದೇಶದನ್ವಯ ಶ್ರೀ ಬಿ.ಶಂಕರನಾರಾಯಣ ಭಟ್ಟ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೈರಂಗಳ ಗ್ರಾಮ ಭಂಟ್ವಾಳ ತಾಲ್ಲೂಕು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ ದಿನಾಂಕ: 6.10.2006ರ ಆದೇಶಕ್ಕೆ ತಿದ್ದೋಲೆಯನ್ನು ಹೊರಡಿಸಿದ್ದು, ಆದೇಶ ಸಂಖ್ಯೆಯನ್ನು "RD 44 ADE 2004" ಅನ್ನು "RD 07 ADE 2005" ಎಂದು ಓದಿಕೊಳ್ಳಲು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3) ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಬಿ.ಶಂಕರನಾರಾಯಣಭಟ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರು ದಿನಾಂಕ: 18.10.2006ರ ಮನವಿಯಲ್ಲಿ ಸದರಿ ವಿಷಯದ ಜಂಟಿ ಇಲಾಖೆ ವಿಚಾರಣೆಯನ್ನು ನಡೆಸಲು ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಬದಲಾಗಿ ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇಲ್ಲಿಗೆ ಬದಲಾಯಿಸಲು ಕೋರಿರುತ್ತಾರೆ. ವಿಚಾರಣಾಧಿಕಾರಿಯವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 07 ಎಡಿಇ 2005, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 07 ಎಡಿಇ 2005, ದಿನಾಂಕ: 6.10.2006 ರಲ್ಲಿ ಆದೇಶಿಸಲಾಗಿದ್ದ ಜಂಟಿ ಇಲಾಖಾ ವಿಚಾರಣೆಯನ್ನು ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಎಂಬುದರ ಬದಲಾಗಿ ಜಿಲ್ಲಾಧಿಕಾರಿಗಳ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಎಂದು ಬದಲಾಯಿಸಿ ಆದೇಶಿಸಿದೆ. ಉಳಿದ ಅಂಶಗಳು ದಿನಾಂಕ: 6.10.2006ರ ಆದೇಶದಲ್ಲಿರುವಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1793

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ಸಹಕಾರ ಸಚಿವಾಲಯ

**ವಿಷಯ:** ಮುಂಡಗೋಡು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/35/ಎಂಆರ್‌ಇ/96, ದಿನಾಂಕ: 22.05.97.
2) ಸರ್ಕಾರದ ಆದೇಶ ಸಂಖ್ಯೆ: ಸಇ/193/ಮಾಇಸೇ/2005, ದಿನಾಂಕ: 06.12.2005.
3) ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಪತ್ರಸಂಖ್ಯೆ: ಕೃಮಾಇ/85/ಸಿಬ್ಬಂದಿ-1(ಸಿ)04, ದಿನಾಂಕ: 07.07.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಮುಂಡಗೋಡು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 8 ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿ, ಮೇಲೆ ಓದಲಾದ (2) ರಲ್ಲಿನ ದಿನಾಂಕ: 06.12.2005ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.05.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01.06.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 251 ಮಾಇಸೇ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಮುಂಡಗೋಡು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.06.2006 ರಿಂದ 31.05.2007 ರವರೆವಿಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 01 |
| 2 | ಲೆಕ್ಕಿಗರು ದರ್ಜೆ-2 | 01 |
| 3 | ಮಾರುಕಟ್ಟೆ ಸಹಾಯಕರು | 03 |
| 4 | ದ್ವಿತೀಯ ದರ್ಜೆ ಸಹಾಯಕರು | 01 |
| 5 | ಗ್ರೂಪ್ ಡಿ ನೌಕರರು | 02 |
| | **ಒಟ್ಟು** | **08** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ) ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 371 ಆಂಅಸ 2006, ದಿನಾಂಕ: 21.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: 01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 1796 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಬೇಲೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/50/ಎಂಆರ್‌ಇ/96, ದಿನಾಂಕ: 05.08.1998.

2) ಸರ್ಕಾರದ ಆದೇಶ ಸಂಖ್ಯೆ: ಸಇ/123/ಮಾಇಸೇ/2004, ದಿನಾಂಕ: 06.02.2004.

3) ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಪತ್ರಸಂಖ್ಯೆ: ಕೃಮಾಇ/394/ಸಿಬ್ಬಂದಿ-1(ಸಿ) 03, ದಿನಾಂಕ: 19.08.2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಬೇಲೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 7 ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿ, ಮೇಲೆ ಓದಲಾದ (2) ರಲ್ಲಿನ ದಿನಾಂಕ: 06.02.2004ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.07.2005 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01.08.2005 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 270 ಮಾಇಸೇ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಬೇಲೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.08.2005 ರಿಂದ 31.07.2007 ರವರೆವಿಗೆ ಒಂದು ವರ್ಷಗಳ ಅವಧಿಗೆ ಮುಂದುವರಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 01 |
| 2 | ಲೆಕ್ಕಿಗರು | 01 |
| 3 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-3 | 03 |
| 4 | ಸಿಪಾಯಿ | 02 |
| | **ಒಟ್ಟು** | **07** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ) ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 355 ಆಂಅಸ 2006, ದಿನಾಂಕ: 21.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: 01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 1797 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಬೆಳ್ತಂಗಡಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಮಾತೂ/231/ಎಂಆರ್‌ಇ/97, ದಿನಾಂಕ: 16.04.1999.

2) ಸರ್ಕಾರದ ಆದೇಶ ಸಂಖ್ಯೆ: ಸಇ/269/ಮಾಇಸೇ/2005, ದಿನಾಂಕ: 28.04.2006.

3) ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಪತ್ರಸಂಖ್ಯೆ: ಕೃಮಾಇ/44/ಸಿಬ್ಬಂದಿ-1(ಸಿ)05, ದಿನಾಂಕ: 14.08.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಬೆಳ್ತಂಗಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 10 ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿ, ಮೇಲೆ ಓದಲಾದ (2) ರಲ್ಲಿನ ದಿನಾಂಕ: 28.04.2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 14.04.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 15.04.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 292 ಮಾಇಸೇ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಬೆಳ್ತಂಗಡಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 15.04.2006 ರಿಂದ 14.04.2007 ರವರೆವಿಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 01 |
| 2 | ಲೆಕ್ಕಿಗರು ದರ್ಜೆ-2 | 01 |
| 3 | ಪ್ರಥಮ ದರ್ಜೆ ಸಹಾಯಕರು | 01 |
| 4 | ಬೆರಳಚ್ಚುಗಾರರು | 01 |
| 5 | ಮಾರುಕಟ್ಟೆ ಸಹಾಯಕರು | 03 |
| 6 | ಗ್ರೂಪ್ ಡಿ | 02 |
| 7 | ವಾಹನ ಚಾಲಕ | 01 |
| | **ಒಟ್ಟು** | **10** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ) ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 292 ಆಂಅಸ 2006, ದಿನಾಂಕ: 21.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: 01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 1798 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಕಲ್ಲಘಟಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/38/ಎಂಆರ್‌ಇ/86, ದಿನಾಂಕ: 20.06.92.

2) ಸರ್ಕಾರದ ಆದೇಶ ಸಂಖ್ಯೆ: ಸಇ/273/ಮಾಇಸೇ/2005, ದಿನಾಂಕ: 15.05.2006.

3) ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಪತ್ರಸಂಖ್ಯೆ: ಕೃಮಾಇ/86/ಸಿಬ್ಬಂದಿ-1(ಸಿ)04, ದಿನಾಂಕ: 14.08.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಕಲ್ಲಘಟಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 5 ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿ, ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 19.06.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 20.06.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 293 ಮಾಇಸೇ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕಲ್ಲಘಟಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 20.06.2006 ರಿಂದ 19.06.2007 ರವರೆವಿಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಸಹಾಯಕ ಕಾರ್ಯದರ್ಶಿ | 1 |
| 3 | ಲೆಕ್ಕಿಗರು ದರ್ಜೆ-2 | 1 |
| 4 | ಆಂತರಿಕ ಲೆಕ್ಕಪರಿಶೋಧಕರು | 1 |
| 5 | ಬೆರಳಚ್ಚುಗಾರರು | 1 |
| | **ಒಟ್ಟು** | **05** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ) ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 391 ಆಂಅಸ 2006, ದಿನಾಂಕ: 21.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: 01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 1799 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಿರುವುದನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 111 ಡಿಪಿಐ 2006, ದಿನಾಂಕ: 11.09.2006.

2) ಶ್ರೀಮತಿ ಎನ್.ಕೆ. ಸಂಗೀತಾ, ಇವರ ಮನವಿ ದಿನಾಂಕ: 16.09.2006.

3) ಶ್ರೀ ಎಲ್.ನಾಗರಾಜು ಇವರ ಮನವಿ ದಿನಾಂಕ: 18.09.2006.

4) ಶ್ರೀ ಪುಟ್ಟಯ್ಯ ಇವರ ಮನವಿ ದಿನಾಂಕ: 20.09.2006.

5) ಶ್ರೀಮತಿ ಎಂ.ಎಸ್.ಸ್ನೇಹಲತ ಇವರ ಮನವಿ ದಿನಾಂಕ: 25.09.2006.

6) ಶ್ರೀಮತಿ ಭಾರತಿ ಮೋಹನ ಕೋಟಿ ಇವರ ಮನವಿ ದಿನಾಂಕ: 23.09.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಸ್ಥಳನಿಯುಕ್ತಿಗೊಳಿಸಲಾಗಿದೆ. ಮೇಲೆ ಓದಲಾದ (2) ರಿಂದ (5) ರವರೆಗಿನ ಮನವಿಗಳಲ್ಲಿ ಉಪನ್ಯಾಸಕರುಗಳು ತಾತ್ಕಾಲಿಕವಾಗಿ ಬಡ್ತಿಯನ್ನು ನಿರಾಕರಿಸುತ್ತಾ, ರದ್ದುಪಡಿಸಿ ಅದೇ ಸ್ಥಳದಲ್ಲಿಯೇ ಮುಂದುವರಿಸುವಂತೆ ಮನವಿ ಮಾಡಿರುತ್ತಾರೆ. ಮೇಲೆ ಓದಲಾದ (6) ರಲ್ಲಿನ ಉಪನ್ಯಾಸಕರು ಪ್ರಾಂಶುಪಾಲರ ಹುದ್ದೆಯನ್ನು ಸೇವಾವಧಿ ಪೂರ್ಣ ನಿರಾಕರಿಸಿ ಸದರಿ ಸ್ಥಳದಲ್ಲಿಯೇ ಮುಂದುವರಿಸುವಂತೆ ಕೋರಿರುತ್ತಾರೆ. ಮೇಲೆ ಓದಲಾದ (7)ರ ಮನವಿಯಲ್ಲಿ ಶ್ರೀ ಕೆ.ಚಿಕ್ಕಲಿಂಗೇಗೌಡ ಇವರು ಈಗಾಗಲೇ ನಿಯಮ 32 ರಡಿಯಲ್ಲಿ ಪ್ರಾಂಶುಪಾಲರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಬಡ್ತಿನೀಡಿರುವುದನ್ನು ಸೇವಾವಧಿ ಪೂರ್ಣ ನಿರಾಕರಿಸಿ ಉಪನ್ಯಾಸಕರ ಹುದ್ದೆಗೆ ಹಿಂಬಡ್ತಿಗೊಳಿಸಿ, ಅರ್ಥಶಾಸ್ತ್ರ ಉಪನ್ಯಾಸಕರ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿಕೊಡಬೇಕೆಂದು ಮನವಿ ಮಾಡಿರುತ್ತಾರೆ. ಮೇಲಿನ ಎಲ್ಲರ ಮನವಿಗಳನ್ನು ಪರಿಶೀಲಿಸಿದ ನಂತರ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 111 ಡಿಪಿಐ 2006, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2006**

ಪದವಿ ಪೂರ್ವ ಶಿಕ್ಷಣ ಇಲಾಖೆಯ, ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಹಾಗೂ ನಿಯಮ 32 ರಡಿಯಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿರುವ ಅನುಬಂಧದಲ್ಲಿನ ಅಧಿಕಾರಿಗಳಿಗೆ ದಿನಾಂಕ: 11.09.2006 ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 111 ಡಿಪಿಐ 2006 ರಲ್ಲಿ ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅವರ ಹೆಸರುಗಳ ಮುಂದೆ ನಮೂದಿಸಿದಂತೆ ಬಡ್ತಿಯನ್ನು ತಾತ್ಕಾಲಿಕವಾಗಿ ಹಾಗೂ ಸೇವಾವಧಿಪೂರ್ಣ ರದ್ದುಪಡಿಸಿ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ಮುಂದುವರಿಸಿ ಆದೇಶಿಸಿದೆ.

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ಕ್ಕೆ ದಿನಾಂಕ: 22.05.2002ರ ಅಧಿಸೂಚನೆ ಸಂಖ್ಯೆ: ಸಿಆಸುಇ 57 ಎಸ್‌ಆರ್‌ಆರ್ 2001ರ ಪ್ರಕಾರ ನಿಯಮ 4ಎ ನ್ನು ಹೊಸದಾಗಿ ಸೇರ್ಪಡೆಗೊಳಿಸಲಾಗಿದ್ದು, ಸದರಿ ನಿಯಮಗಳ ಪ್ರಕಾರ ಬಡ್ತಿಯನ್ನು ತಾತ್ಕಾಲಿಕವಾಗಿ ಬಿಟ್ಟುಕೊಟ್ಟವರು ಅವರು ಅರ್ಜಿ ಸಲ್ಲಿಸಿದ ದಿನಾಂಕ ಅಥವಾ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಬಡ್ತಿಗೆ ಅರ್ಹರಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1, 2).

ಅನುಬಂಧ

ದಿನಾಂಕ: 11.09.2006ರ ಅಧಿಸೂಚನೆ ಸಂಖ್ಯೆ: ಇಡಿ 111 ಡಿಪಿಐ 2006 ರಲ್ಲಿ ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ರದ್ದುಗೊಳಿಸುವ ಬಗ್ಗೆ

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿಯನ್ನು ರದ್ದುಪಡಿಸಿ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ ಮತ್ತು ಸ್ಥಳ |
|---|---|---|
| 1 | ಸಂಗೀತಾ ಎನ್. ಕಟ್ಟೀಮನಿ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಗುಲ್ಬರ್ಗಾ. | ಬಡ್ತಿಯನ್ನು ತಾತ್ಕಾಲಿಕವಾಗಿ ರದ್ದುಪಡಿಸಿ ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಿದೆ. |
| 2 | ಎಲ್. ನಾಗರಾಜು, ಅರ್ಥಶಾಸ್ತ್ರ ಉಪನ್ಯಾಸಕರು, ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಚನ್ನಪಟ್ಟಣ. | ಬಡ್ತಿಯನ್ನು ತಾತ್ಕಾಲಿಕವಾಗಿ ರದ್ದುಪಡಿಸಿ ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಿದೆ. |
| 3 | ಪುಟ್ಟಯ್ಯ, ಇತಿಹಾಸ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಬೆಳ್ಳಾಳೆ, ಪಾಂಡವಪುರ ತಾ: | ಬಡ್ತಿಯನ್ನು ತಾತ್ಕಾಲಿಕವಾಗಿ ರದ್ದುಪಡಿಸಿ ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಿದೆ. |
| 4 | ಎಂ.ಎನ್. ಸ್ನೇಹಲತ, ಕನ್ನಡ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಹೆಸರುಘಟ್ಟ, ಬೆಂಗಳೂರು ಉತ್ತರ ಜಿಲ್ಲೆ. | ಬಡ್ತಿಯನ್ನು ತಾತ್ಕಾಲಿಕವಾಗಿ ರದ್ದುಪಡಿಸಿ ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಿದೆ. |
| 5 | ಭಾರತಿ ಮೋಹನ ಕೋಟಿ, ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಸಿದ್ದಲಿಂಗನಗರ, ಗದಗ್. | ಸೇವಾವಧಿ ಪೂರ್ಣ ಬಡ್ತಿಯನ್ನು ರದ್ದುಪಡಿಸಿ ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಿದೆ. |

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1, 2).

ಪಿ.ಆರ್. 1800

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ಬುಡಕಟ್ಟು ಸಂಶೋಧನಾ ಸಂಸ್ಥೆಯನ್ನು ಬೆಂಗಳೂರಿನಿಂದ ಮೈಸೂರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಸಕಇ 365 ಪವಯೋ 2004, ದಿನಾಂಕ: 28.12.2004.
2) ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಪವಕನಿ:ಟಿಆರ್ಐ, ಸಿಆರ್-16 2006-07, ದಿನಾಂಕ: 2.8.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಬುಡಕಟ್ಟು ಸಂಶೋಧನಾ ಸಂಸ್ಥೆಯನ್ನು ಬೆಂಗಳೂರು ಅಥವಾ ಮೈಸೂರು ಜಿಲ್ಲೆಯಲ್ಲಿ ಸ್ಥಾಪಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಲಾಗಿತ್ತು.

ಕ್ರಮ ಸಂಖ್ಯೆ (2)ರ ಓದಲಾದ ಪತ್ರದಲ್ಲಿ ನಿರ್ದೇಶಕರು, ಪರಿಶಿಷ್ಠ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ರವರು ಕೇಂದ್ರ ಸರ್ಕಾರದಲ್ಲಿ ದಿನಾಂಕ: 17.12.2005 ರಂದು ನಡೆದ ಸಭೆಯಲ್ಲಿ ವಿಷಯ ಚರ್ಚೆಗೆ ಬಂದು ಬುಡಕಟ್ಟು ಸಂಶೋಧನಾ ಸಂಸ್ಥೆಯ ಕೇಂದ್ರ ಸ್ಥಾನವನ್ನು ಸ್ಥಾಪಿಸುವಂತೆ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಕಛೇರಿ, ಬೆಂಗಳೂರು ಇಲ್ಲಿ ಸ್ಥಾಪಿಸಲು ಕೇಂದ್ರ ಸರ್ಕಾರ ಆದೇಶ ನೀಡಿರುತ್ತದೆ ಎಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 258 ಪವಯೋ 2006, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2006**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಕರ್ನಾಟಕ ಬುಡಕಟ್ಟು ಸಂಶೋಧನಾ ಸಂಸ್ಥೆಯ ಕೇಂದ್ರ ಸ್ಥಾನವನ್ನು ಮೈಸೂರಿಗೆ ವರ್ಗಾಯಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಬಾಟೆ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1816

## FINANCE SECRETARIAT

**Subject:** Special Allowance-Revision and Rationalisation of rates-Sanction/continuance of Special Allowance in certain cases-issue of orders.

**Read:** 1) G.O.No. FD 13 SRP 2000(1) dated: 9th June 2005.
2) G.O.No. FD 27 SRP 2006, dated: 21st November 2006.

**GOVERNMENT ORDER No. FD 27 SRP 2006, Bangalore, Dated: 5th December 2006**

In continuation of Government Order dated: 21.11.2006 read at (2) above, Government are pleased to modify the orders issued in Government Order dated: 9.6.2005 and 21.11.2006 read at (1) and (2) above to the extent indicated below:

1. In the entries under the heading 'DPAR (Accounts-2)' at Sl.No.26 (2) (iii),

(1) after the entries at clause (3), the following entries shall be inserted as (3a):

| | |
|---|---|
| (3a) Assistants | 2 posts |

(2) for the entries at clause (6), the following entries shall be substituted:

| | |
|---|---|
| (6) Dalayat/Jamedar | 1 post |

2. In the entries under the heading 'Karnataka Government Secretariat' at Sl.No.26, after the entries at sub-heading (4) the following entries shall be inserted as (4A):

| **(4A) Finance Department (Computer Cell)** | | |
|---|---|---|
| Special Officer | 1 post | 200 |
| Under Secretary | 1 post | 150 |
| Section Officer | 1 post | 150 |
| Senior Assistant | 2 Posts | 100 |
| Assistant | 2 posts | 100 |
| Stenographer/GPA | 2 posts | 100 |
| Assistant Statistical Officer | 1 post | 100 |

2. These orders will come into force with effect from 1st June 2005.

By Order and in the name of the Governor of Karnataka,

**N.T. NAIK**

P.R. 03

Under Secretary to Government,
Finance Department (Services-2).

**AGRICULTURE & HORTICULTURE SECRETARIAT**

**Subject:** Constitution of Committee to review the progress of National Horticulture Mission programmes - Modification regarding.

**Read:** 1) G.O.No. AHD 179 HPP 2006, dated: 9.10.2006.

**PREAMBLE:**

A Review Committee under the Chairmanship of Additional Chief Secretary and Development Commissioner to review the implementation and progress of National Horticulture Mission programmes was constituted vide Government Order read at (1) above. There is a need to include Mission Director, National Horticulture Mission, Government of India, Managing Director, Karnataka State Agricultural Marketing Board and Managing Director, Karnataka State Agricultural Produce Processing and Export Corporation (KAPPEC) as members of Review Committee, and Executive Director, Karnataka State Horticulture Mission Agency as Member-Secretary of the said Review Committee. Hence, the following orders.

**GOVERNMENT ORDER No. AHD 228 HPP 2006, Bangalore, Dated: 13th December 2006**

Government is pleased to re-constitute the State Level Review Committee under the Chairmanship of the Additional Chief Secretary and Development Commissioner to review the implementation and progress of National Horticulture Mission programmes and to oversee the day-to-day functioning of National Horticulture Mission programmes in the State. The composition of the said Committee will be as below.

| | | |
|---|---|---|
| 1 | Additional Chief Secretary and Development Commissioner. | Chairman |
| 2 | Additional Chief Secretary & Principal Secretary to Govt., Planning Department or his/her representative not below the rank of Director concerned | Member |
| 3 | Principal Secretary to Govt., Finance Department or his representative not below the rank of Secretary (Expenditure) | Member |
| 4 | Principal Secretary to Govt., (Horticulture) Agriculture & Horticulture Department | Member |
| 5 | Mission Director, National Horticulture Mission, Government of India, | Member |
| 6 | Managing Director, Karnataka State Agricultural Marketing Board. | Member |
| 7 | Managing Director, Karnataka State Agricultural Produce Processing and Export Corporation Ltd. (KAPPEC) | Member |

| | | |
|---|---|---|
| 8 | Director of Horticulture, (Mission Director, Karnataka State Horticulture Mission Agency) | Member |
| 9 | Executive Director, Karnataka State Horticulture Mission Agency. | Member-Secretary |

This order comes into with immediate effect.

By Order and in the name of the Governor of Karnataka,

**S. RAJU**

P.R. 05

Under Secretary to Government, (Horticulture)
Agriculture & Horticulture Department.

**ಒಳಾಡಳಿತ ಸಚಿವಾಲಯ**

**ವಿಷಯ:** ನಕಲಿ ಛಾಪಾಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ಲೋಪವೆಸಗಿರುವ ಪೊಲೀಸ್ ಅಧಿಕಾರಿಗಳ ವಿರುದ್ಧ ವಿಚಾರಣಾಧಿಕಾರಿಗಳನ್ನು ಬದಲಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಒಇ 253 ಪೊಸಿಪ 2003, ದಿನಾಂಕ: 26.11.2004.

2) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ5:2:2003–04, ದಿನಾಂಕ: 12.01.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965ರ 6 ಮತ್ತು 8ರ ಮೇರೆಗೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಎ.ಡಿ.ಜಿ.ಪಿ. (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1) ಶ್ರೀ ಟಿ.ಜಿ.ಸಂಗ್ರಾಮ್ ಸಿಂಗ್, ಎ.ಸಿ.ಪಿ. ಹಲಸೂರು ಉಪ ವಿಭಾಗ, ಬೆಂಗಳೂರು ನಗರ.
2) ಶ್ರೀ ವಾಲಿ ಬಾಷಾ, ಪಿ.ಐ. ಸಿ.ಸಿ.ಬಿ. ಹೆಚ್ ಮತ್ತು ಬಿ, ಬೆಂಗಳೂರು.
3) ಶ್ರೀ ವಜೀರ್ ಅಹಮ್ಮದ್ ಖಾನ್, ಪಿ.ಎಸ್.ಐ. ಕೆ.ಜಿ.ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ.
4) ಶ್ರೀ ಕೆ.ಎಂ.ಮುದ್ದಯ್ಯ, ಡಿ.ಎಸ್.ಪಿ.

ಈ ವಿಚಾರಣೆಯನ್ನು ನಡೆಸಲು ಅಡಿಷನಲ್ ಕಮೀಷನರ್ ಆಫ್ ಪೊಲೀಸ್ (ಟ್ರಾಫಿಕ್ ಮತ್ತು ಸೆಕ್ಯೂರಿಟಿ) ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1) ಶ್ರೀ ಜಿ.ಎ.ಬಾವ, ಎ.ಸಿ.ಪಿ. ಸಿಟಿ ಕ್ರೈಂ ಬ್ರಾಂಚ್, ಬೆಂಗಳೂರು ನಗರ.
2) ಶ್ರೀ ಹೆಚ್.ಜೆ.ಮರಿಸ್ವಾಮಿ ಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಅಶೋಕನಗರ ಪೊಲೀಸ್ ಠಾಣೆ, ಬೆಂಗಳೂರು ನಗರ.
3) ಶ್ರೀ ಕೆ.ನಂಜುಂಡೇಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಸಿ.ಸಿ.ಬಿ. ಬೆಂಗಳೂರು.
4) ಶ್ರೀ ವಾಲಿಬಾಷಾ, ಪೊಲೀಸ್ ಇನ್ಸ್‌ಪೆಕ್ಟರ್ (ಅಮಾನತ್ತಿನಲ್ಲಿದ್ದಾರೆ).
5) ಶ್ರೀ ವಜೀರ್ ಅಹ್ಮದ್ ಖಾನ್, ಪಿ.ಎಸ್.ಐ. (ಅಮಾನತ್ತಿನಲ್ಲಿದ್ದಾರೆ).
6) ಶ್ರೀ ಎಂ.ಎ.ಸೌದಾಗರ್, ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು.
7) ಶ್ರೀ ಕೆ.ಎಂ.ಮುದ್ದಯ್ಯ, ಡಿವೈ.ಎಸ್.ಪಿ. (ಅಮಾನತ್ತಿನಲ್ಲಿದ್ದಾರೆ).

ಈ ವಿಚಾರಣೆಯನ್ನು ನಡೆಸಲು ಎ.ಡಿ.ಜಿ.ಪಿ. (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಯವರು ರಾಜ್ಯ ಗುಪ್ತಚರದಳದ ಮುಖ್ಯಸ್ಥನಾಗಿದ್ದ ಸಮಯದಲ್ಲಿ ಈ ಪ್ರಕರಣದ ಬಗ್ಗೆ ಸರ್ಕಾರಕ್ಕೆ ಹಲವಾರು ಗೌಪ್ಯ ಮಾಹಿತಿಗಳನ್ನು ನೀಡಿದ್ದು ವಿಚಾರಣೆಯನ್ನು ನಡೆಸಿದರೆ ದೋಷಿತ ಅಧಿಕಾರಿಗಳು ಆಕ್ಷೇಪಣೆ ಮಾಡುವ ಸಂಭವವಿರುವುದರಿಂದ ಬೇರೆ ಎ.ಡಿ.ಜಿ.ಪಿ. ಮತ್ತು ಐ.ಜಿ. (ಪ್ರಿಸನ್ಸ್) ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಮೇಲೆ ಓದಲಾದ (2) ರಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ. ಈ ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ: 10.02.2005ನ್ನು ಮಾರ್ಪಡಿಸಿ ಈ ವಿಚಾರಣೆಯನ್ನು ನಡೆಸಲು ಶ್ರೀ ಎಸ್.ಟಿ.ರಮೇಶ್, ಐ.ಪಿ.ಎಸ್. ಎ.ಡಿ.ಜಿ.ಪಿ. ಮತ್ತು ಡಿಜಿ, ಪ್ರಿಸೆನ್ಸ್, ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ದಿನಾಂಕ: 10.02.2005ರ ಆದೇಶದಲ್ಲಿನ ಉಳಿದ ಇತರೇ ಅಂಶಗಳ ಬಗೆಗಿನ ಅಂಶಗಳು ಯಥಾವತ್ತಾಗಿ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1784

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).